WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮಾರ್ಚ್ ೨೯, ೨೦೧೨ (ಚೈತ್ರ ೯, ಶಕ ವರ್ಷ ೧೯೩೪) | ಸಂಚಿಕೆ ೧೩ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೆಳ್ಳಂಪಳ್ಳಿ ಗ್ರಾಮದ ಸುವರ್ಣ ನದಿಯ ಉಪನದಿಗೆ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ / ತಾಂಸ–5–ಸ. ಇಂ.–11 / ಉ.ಜಿ / ಉ.ತಾ / ಬೆಳ್ಳಂಪಳ್ಳಿ / ಇ–ಪ್ರೊಕ್ಯೂರ್‌ಮೆಂಟ್ / ಟೆಂಡರ್ ಅನುಮೋದನೆ / 2011/277, ದಿನಾಂಕ 19.01.2012.

**ಪ್ರಸ್ತಾವನೆ :**

ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೆಳ್ಳಂಪಳ್ಳಿ ಗ್ರಾಮದ ಸುವರ್ಣ ನದಿಯ ಉಪನದಿಗೆ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 50.00 ಲಕ್ಷಗಳ ಅಂದಾಜು ಪಟ್ಟಿಗೆ ಅಧೀಕ್ಷಕ ಇಂಜಿನಿಯರ್, ಸಣ್ಣ ನೀರಾವರಿ, ಮೈಸೂರು ವೃತ್ತ ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ, ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮದಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಉಡುಪಿ ಜಿಲ್ಲಾ ಟೆಂಡರ್ ಬುಲೆಟಿನ್ | 21.11.2011 |
| ವಿಜಯ ಕರ್ನಾಟಕ ದಿನ ಪತ್ರಿಕೆ | 10.12.2011 |
| ಡೆಕ್ಕನ್ ಹೆರಾಲ್ಡ್ | 10.12.2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ತೆರೆಯಲಾಗಿದ್ದು ಹಾಗೂ ಇವರ ಟೆಂಡರ್ ಅರ್ಹತೆ ಹೊಂದಿದ್ದು, ವಿವರಗಳು ಕೆಳಕಂಡಂತಿವೆ.

| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | ರೂ. 49,69,394/– |
|---|---|---|---|
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು | 60,92,966/– | 22,60985 ಹೆಚ್ಚು |

ಮೇಲ್ಕಂಡಂತೆ ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 22.60985 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.75% ಹೆಚ್ಚಿನ ದರಗಳಿಗೆ ಅಂದರೆ ರೂ. 57,02,380/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 13 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 03ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಡುಪಿ ಜಿಲ್ಲೆ, ಉಡುಪಿ ತಾಲ್ಲೂಕು, ಬೆಳ್ಳಂಪಳ್ಳಿ ಗ್ರಾಮದ ಸುವರ್ಣ ನದಿಯ ಉಪನದಿಗೆ ಉಪ್ಪು ನೀರು ತಡೆ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 49,69,394/–ಗಳ ಮೇಲೆ ಶೇ. 14.75ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 57,02,380/–ಗಳಿಗೆ (ರೂ. ಐವತ್ತೇಳು ಲಕ್ಷ ಎರಡು ಸಾವಿರದ ಮೂರು ನೂರ ಎಂಬತ್ತು ರೂಪಾಯಿಗಳ ಮಾತ್ರ) ಕಾಮಗಾರಿಯನ್ನು ಶ್ರೀ ರಾಜೇಶ್ ಕಾರಂತ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರುದ್ರಮೂರ್ತಿ**

ಪಿ.ಆರ್. 588

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ದಯಾನಂದ ಬಾಳಪ್ಪ ಯಲಿಗಾರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಮೊರಬ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 303 ಹೆಚ್‌ಎಸ್‌ಹೆಚ್ 2010 ದಿನಾಂಕ 09–08–2010.
2. ಆಯುಕ್ತರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರುರವರ ಪತ್ರ ಸಂಖ್ಯೆ: ಜಿಆರ್‌ಓ (3)97/2011–12 ದಿನಾಂಕ 15/09/2011.

**ಪ್ರಸ್ತಾವನೆ :**

ಡಾ॥ ದಯಾನಂದ ಬಾಳಪ್ಪ ಯಲಿಗಾರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಮೊರಬ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ ಇವರು ಮೇಲೆ ಕ್ರಸಂ: (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ರೀತ್ಯಾ ಪ್ರಾ.ಆ.ಕೇಂದ್ರ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ ಇಲ್ಲಿಗೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ನೇಮಕ ಹೊಂದಿ ದಿನಾಂಕ: 19/08/2010ರಂದು ಪೂರ್ವಾಹ್ನ ಕರ್ತವ್ಯಕ್ಕೆ ವರದಿ ಮಾಡಿಕೊಂಡು ದಿನಾಂಕ: 20/08/2010ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ಗೈರುಹಾಜರಾಗಿರುತ್ತಾರೆ. ಈ ಬಗ್ಗೆ ಜಿಲ್ಲಾ ಆಕುಕ ಅಧಿಕಾರಿಗಳು, ಧಾರವಾಡ ಇವರು ಕರ್ತವ್ಯಕ್ಕೆ ಹಿಂದಿರುಗುವಂತೆ ವಿವರಣೆ ಕೋರಲಾಗಿ ಸದರಿ ವೈದ್ಯರು 6 ವಾರಗಳ ಕಾಲ ರಜೆ ಮಂಜೂರು ಮಾಡುವಂತೆ ಕೋರಿರುತ್ತಾರೆ. ಹೊಸದಾಗಿ ನೇಮಕಗೊಂಡ ವೈದ್ಯರಿಗೆ ರಜೆ ಮಂಜೂರು ಮಾಡಲು ಅವಕಾಶವಿಲ್ಲವೆಂದು ತಿಳಿಸಿ ಕೂಡಲೇ ಕರ್ತವ್ಯಕ್ಕೆ ಹಾಜರಾಗಲು ದಿನಾಂಕ 04–09–2010ರಂದು ಸೂಚಿಸಿದ್ದರೂ ವೈದ್ಯರು ಕರ್ತವ್ಯಕ್ಕೆ ಗೈರು ಹಾಜರಾಗಿರುವುದಾಗಿ ಜಿಲ್ಲಾ ಆಕುಕ ಅಧಿಕಾರಿ, ಧಾರವಾಡ ಇವರು ವರದಿ ಮಾಡಿರುವ ವಿಷಯವನ್ನು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು ಅವರು ಸರ್ಕಾರಕ್ಕೆ ವರದಿ ಮಾಡಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಡಾ॥ ದಯಾನಂದ ಬಾಳಪ್ಪ ಯಲಿಗಾರರವರು ಮೇಲೆ ಕ್ರ.ಸಂ:(1)ರಲ್ಲಿ ಓದಲಾದ ಅಧಿಸೂಚನೆ ರೀತ್ಯಾ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ನೇಮಕವಾಗಿದ್ದು, ಈ ಆಧಾರದ ಮೇಲೆ ಸದರಿಯವರು ದಿನಾಂಕ 19–08–2010ರ ಪೂರ್ವಾಹ್ನದಂದು ಪ್ರಾ.ಆ.ಕೇಂದ್ರ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿ (ದಾಖಲಾತಿ ಪ್ರಕಾರ) ದಿನಾಂಕ 20/08/2010ರಿಂದ ಇಲ್ಲಿಯವರೆವಿಗೂ ಸದರಿಯವರು ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರುಹಾಜರಾಗಿದ್ದು, ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗೂ ಈ ಅವಧಿಯಲ್ಲಿ ನೇಮಕ ಹೊಂದಿದ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುವಲ್ಲಿ ಅಸಮರ್ಥರಾಗಿರುವುದರಿಂದ ಅವರ ಖಾಯಂಪೂರ್ವ ಸೇವಾವಧಿಯು ತೃಪ್ತಿಕರವಾಗಿಲ್ಲದೇ ಇರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ 6(1)(2) ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 147 ಎಂಎಸ್‌ಎ 2011, ಬೆಂಗಳೂರು, ದಿನಾಂಕ: 17–01–2012**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ॥ ದಯಾನಂದ ಬಾಳಪ್ಪ ಯಲಿಗಾರ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಮೊರಬ, ನವಲಗುಂದ ತಾಲ್ಲೂಕು, ಧಾರವಾಡ ಜಿಲ್ಲೆ ಇವರ ಖಾಯಂಪೂರ್ವ ಸೇವಾವಧಿಯಲ್ಲಿ ಅವರ ಸೇವೆಯು ತೃಪ್ತಿಕರವಾಗಿಲ್ಲದೇ ಇರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ ನಿಯಮ 6(1)(2) ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಫ್. ಹುಬ್ಬಳ್ಳಿ**

ಪಿ.ಆರ್. 589

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಜಯಶ್ರೀ ಬೀಳಗಿ, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ ಖಾಜಿ ಹೊಸಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. ಇವರನ್ನು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಆಕುಕ 648 ಹೆಚ್‌ಎಸ್‌ಹೆಚ್ 2002, ದಿನಾಂಕ 23–12–2003.

**2.** ಆಯುಕ್ತರು ಆಕುಕ ಸೇವೆಗಳು ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ/ಬೆ.ಗ್ರಾ/08/2005–06 ದಿನಾಂಕ: 22/8/2011 ಮತ್ತು 9/12/2011.

**ಪ್ರಸ್ತಾವನೆ :**

ಡಾ॥ ಜಯಶ್ರೀ ಬೀಳಗಿ ರವರು ಉಲ್ಲೇಖ (1)ರ ದಿನಾಂಕ: 23/12/2003ರ ಸರ್ಕಾರದ ಆದೇಶದನ್ವಯ ವೈದ್ಯಾಧಿಕಾರಿಯಾಗಿ ನೇಮಕ ಹೊಂದಿ ಪ್ರಾಥಮಿಕ ಆರೋಗ್ಯ ಕೇಂದ್ರ, ಖಾಜಿ ಹೊಸಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇಲ್ಲಿ ದಿನಾಂಕ: 30/1/2004ರಂದು ಕಾರ್ಯವರದಿ ಮಾಡಿಕೊಂಡು ನಂತರ ದಿನಾಂಕ: 23/3/2005 ರಿಂದ 12/6/2005ರವರೆಗೆ ಹಾಗೂ ದಿನಾಂಕ: 16/6/2005 ರಿಂದ ಸತತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದರಿಂದ ಇವರಿಗೆ ಕಠಿಣ ದಂಡನೆ ವಿಧಿಸುವಂತೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 22/8/2011 ಮತ್ತು 9/12/2011 ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ, ಡಾ॥ ಜಯಶ್ರೀ ಬೀಳಗಿ, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ ಖಾಜಿ ಹೊಸಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರು ದಿನಾಂಕ: 30/1/2004ರಲ್ಲಿ ಕೆಲಸಕ್ಕೆ ಸೇರಿದ್ದು, ಪರಿವೀಕ್ಷಣಾ ಅವಧಿಯಲ್ಲಿದ್ದರೂ ಸಹ ದಿನಾಂಕ: 23/3/2005 ರಿಂದ 12/6/2005ರವರೆಗೆ ಹಾಗೂ ದಿನಾಂಕ: 16/6/2005 ರಿಂದ ಸತತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿದ್ದು, ಸದರಿಯವರ ಸೇವೆಯು ತೃಪ್ತಿಕರವಾಗಿಲ್ಲದೆ ಇರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು 1977ರ ನಿಯಮ (6)(1)(2)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 120 ಎಂಎಸ್‌ಎ 2011, ಬೆಂಗಳೂರು, ದಿನಾಂಕ: 20–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ॥ ಜಯಶ್ರೀ ಬೀಳಗಿ, ವೈದ್ಯಾಧಿಕಾರಿಗಳು, ಪ್ರಾಥಮಿಕ ಆರೋಗ್ಯ ಕೇಂದ್ರ, ಖಾಜಿ ಹೊಸಹಳ್ಳಿ, ಹೊಸಕೋಟೆ ತಾಲ್ಲೂಕು. ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಪರಿವೀಕ್ಷಣಾ ಅವಧಿಯಲ್ಲಿದ್ದು, ಸದರಿಯವರ ಸೇವೆಯು ತೃಪ್ತಿಕರವಾಗಿಲ್ಲದಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಾವಳಿಗಳು 1977ರ ನಿಯಮ (6)(1)(2)ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಫ್. ಹುಬ್ಬಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 590

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಶ್ವೇತಾ ಆರ್. ಹೊಸ್ಕೇರಿ, ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಹಟ್ಟಿಕೇರಿ, ಅಂಕೋಲ ತಾಲ್ಲೂಕು, ಉ.ಕ. ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಕುರಿತು.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಜಿ/ಬೆವಿ(1)/ಕಾ/06/2011–12 ದಿನಾಂಕ: 15/12/2011.

**ಪ್ರಸ್ತಾವನೆ :**

ಡಾ॥ ಶ್ವೇತಾ ಆರ್. ಹೊಸ್ಕೇರಿ, ಇವರು ವಿಶೇಷ ನೇಮಕಾತಿ ಸಮಿತಿಯಿಂದ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 122 ಹೆಚ್‌ಎಸ್‌ಹೆಚ್ 2007 ದಿನಾಂಕ: 08/03/2008 ರನ್ವಯ ಪ್ರಾಥಮಿಕ ಆರೋಗ್ಯ ಕೇಂದ್ರ, ಹಟ್ಟಿಕೇರಿ, ಅಂಕೋಲ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇಲ್ಲಿ ದಿನಾಂಕ: 28/02/2008 ರಂದು ಹುದ್ದೆಗೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ: 21/04/2008 ರಿಂದ ಅನಧಿಕೃತ ಗೈರುಹಾಜರಾಗಿದ್ದು, ಯಾವುದೇ ಮರುಕರೆ ಪತ್ರಗಳಿಗೆ ಸ್ಪಂದಿಸದೇ ಕರ್ತವ್ಯಕ್ಕೂ ಹಾಜರಾಗಿರುವುದಿಲ್ಲ. ಇವರ ಖಾಯಂಪೂರ್ವ ಸೇವಾವಧಿ ಘೋಷಣೆಯಾಗದಿರುವುದರಿಂದ ಹಾಗು ಇವರಿಂದ ಸರ್ಕಾರಕ್ಕೆ ಯಾವುದೇ ಬಾಕಿ ಇರುವುದಿಲ್ಲವಾದ್ದರಿಂದ ಖಾಯಂಪೂರ್ವ ಸೇವಾ ನಿಯಮಗಳ ಪ್ರಕಾರ ಸೇವೆಯಿಂದ ವಿಮೋಚನೆಗೊಳಿಸುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ. ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 688 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ: 19–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ॥ ಶ್ವೇತಾ ಆರ್. ಹೊಸ್ಕೇರಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಹಟ್ಟಿಕೇರಿ, ಅಂಕೋಲ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ ಇವರು ಖಾಯಂಪೂರ್ವ ಸೇವಾವಧಿಯಲ್ಲಿ ದಿನಾಂಕ: 21/04/2008 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಸೂಕ್ತರಲ್ಲವೆಂದು ಪರಿಗಣಿಸಿ, ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 6 ರಡಿಯಲ್ಲಿ ಸದರಿಯವರನ್ನು ದಿನಾಂಕ: 21/04/2008 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಪಿ.ಆರ್. 591

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಅಮೂಲ್ಯ, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಪಿರಿಯಾಪಟ್ಟಣ, ಮೈಸೂರು ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್‌ಆರ್‌ಓ/33/2011-12 ದಿನಾಂಕ: 08/11/2011.

**ಪ್ರಸ್ತಾವನೆ :**

ಡಾ॥ ಅಮೂಲ್ಯ, ಇವರು ಗುತ್ತಿಗೆ ಆಧಾರದ ಮೇಲೆ ದಂತ ಆರೋಗ್ಯಾಧಿಕಾರಿಯಾಗಿ ಸಾರ್ವಜನಿಕ ಆಸ್ಪತ್ರೆ, ಪಿರಿಯಾಪಟ್ಟಣ, ಮೈಸೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 185 ಹೆಚ್‌ಎಸ್‌ಹೆಚ್ 2009 ದಿನಾಂಕ 07/08/2010 ರಲ್ಲಿ ಸೇವೆಯಲ್ಲಿ ಸಕ್ರಮಗೊಂಡು ದಿನಾಂಕ: 10/08/2010 ರಂದು ಹುದ್ದೆಗೆ ಹಾಜರಾಗಿರುತ್ತಾರೆ. ಇವರು ವೈಯಕ್ತಿಕ ಕಾರಣದಿಂದ ದಿನಾಂಕ: 25-04-2011 ರಿಂದ ಅನ್ವಯವಾಗುವಂತೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿರುತ್ತಾರೆ. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ, ಸದರಿ ವೈದ್ಯರ ವಿರುದ್ಧ ಇಲಾಖಾ ವಿಚಾರಣೆಯಾಗಲೀ ಅಥವಾ ಸರ್ಕಾರಕ್ಕೆ ಯಾವುದೇ ಬಾಕಿಯಾಗಲೀ ಇರುವುದಿಲ್ಲವಾದ್ದರಿಂದ ಇವರ ರಾಜೀನಾಮೆಯನ್ನು ಅಂಗೀಕರಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 59 ಹೆಚ್‌ಎಸ್‌ಡಿ 2011, ಬೆಂಗಳೂರು, ದಿನಾಂಕ: 19-01-2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಡಾ॥ ಅಮೂಲ್ಯ, ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ ಪಿರಿಯಾಪಟ್ಟಣ, ಮೈಸೂರು ಜಿಲ್ಲೆ ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ದಂತ ಆರೋಗ್ಯಾಧಿಕಾರಿ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ದಿನಾಂಕ: 25-04-2011 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು)

ಪಿ.ಆರ್. 592

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ಆಕುಕ 125 ಎಂಎಸ್‌ಎನ್ 2011, ಬೆಂಗಳೂರು, ದಿನಾಂಕ: 4-01-2012**

ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 110 ಹೆಚ್‌ಎಸ್‌ಎಂ 2010, ದಿನಾಂಕ: 30-07-2010 ರ ಆದೇಶದ ಕ್ರಮ ಸಂಖ್ಯೆ: (9) ರ ಕಾಲಂ 2 ರಲ್ಲಿನ "ನಳಿನಾ ಕುಮಾರಿ" ಎಂಬುದರ ಬದಲಾಗಿ "ಎಸ್.ಎನ್. ನಳಿನಾ ಕುಮಾರಿ" ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೃಂದ ಮತ್ತು ನೇಮಕಾತಿ)

ಪಿ.ಆರ್. 593

## HEALTH AND FAMILY WELFARE SECRETARIAT

**Sub :** Extention of the 2006 revised AICTE Pay Scales to the Teaching Staff of Aided Ayurveda Medical Colleges under the Department of Ayush – regarding.

**Read :** 1. Government Order No. HFW 321 PIM 1999, dated:28-08-2000.
2. Letter No. AYUSH/1/Est.(5)/2010-11, dated : 03-05-2010 of the Director of AYUSH.

**Preamble:**

In Government Order read at (1) above, sanction was accorded to extend the benefit of 1996 AICTE Pay Scales as indicated below to the teaching staff of the following five Aided Ayurveda Medical Colleges under the administrative control of the Department of Indian Systems of Medicine and Homoeopathy in the State with effect from 01-11-1999, subject to certain conditions specified thereunder.

1. BMK Ayurveda Medical College, Belgaum
2. Ayurveda Medical College, Bijapur
3. Ayurveda Medical College, Hubli
4. DGM Ayurveda Medical College, Gadag
5. DM Ayurveda Medical College, Udupi.

| Sl. No. | Cadre | Pay Scale (In ₹) |
|---|---|---|
| 1 | Lecturer | 8000-13500 |
| 2 | Assistant Professor | 10000-15200 |
| 3 | Professor | 14300-19250 |
| 4 | Principal | 14300-19250 |

The Ministry of Human Resources Development, Government of India have announced the Revised 2006 AICTE Pay Scales in its Notification dated 13-03-2010. A Committee was constituted under the Chairmanship of Chief Administrative Officer of the Department of AYUSH to examine the question of estension of 2006 Revised AICTE Pay Scales to the Teaching Staff of the aforesaid five Aided Ayurveda Medical Colleges in the State. The said Committee has recommended the extension of 2006 Revised AICTE Pay Scales to the teaching staff of the said five aided Colleges coming under the administrative control of the Department of AYUSH as follows :

| Sl. No. | Cadre | Existing Pay Scale (In ₹) | Revised Pay Scale (In ₹) |
|---|---|---|---|
| 1 | Lecturer | 8000-13500 | 15600-39100+AGP 6000 |
| 2 | Assistant Professor | 10000-15200 | 15600-39100+AGP 8000 |
| 3 | Professor | 14300-19250 | 37400-67000+AGP 10000 |
| 4 | Principal | 14300-19250 | 37400-67000+AGP 10000 |

The Director of AYUSH in his letter read at (2) above has recommended for extending the 2006 Revised AICTE Pay Scales to the Teaching Staff of the five aided Ayurveda Medical Colleges in question which now comes under the administrative control of the Department of AYUSH in the State from the year 2006 iln accordance with the AICTE Regulations issued by the Ministry of Human Resource Development, Government of India.

After careful examination of the proposal, Government of Karnataka have decided to extend the 2006 Revised AICTE Pay Scales to the Teaching Staff of the five aided Ayurveda Medical Colleges coming under the administrative control of the Department of AYUSH in the Sate with effect from 01-04-2011 and accordingly the following orders are issued.

**Government Order No. HFW 178 PTD 2010 Bangalore, Dated: 27th January 2012.**

Government of Karnataka are pleased to extend the 2006 Revised AICTE Pay Scales to the Teaching Faculty of the five aided Ayurveda Medical Colleges viz., (1) BMK Ayurveda Medical College, Belgaum (2) Ayurveda Medical College, Bijapur (3) Ayurveda Medical College, Hubli (4) DGM Ayurveda Medical College, Gadag (5) DM Ayurveda Medical College, Udupi which come under the administrative control of the Department of AYUSH in the State with effect from 01-04-2011 as follows :

| Sl. No. | Post | Existing Pay Scale (In ₹) | Revised Pay Band (In ₹) | Academic Grade Pay (In ₹) |
|---|---|---|---|---|
| 1 | Lecturer | 8000-13500 | 15600-39100 | 6000 |
| 2 | Assistant Professor | 10000-15200 | 15600-39100 | 8000 |
| 3 | Professor | 14300-19250 | 37400-67000 | 10000 |
| 4 | Principal | 14300-19250 | 37400-67000 | 10000 |

1. **FIXATION FORMULA :**

   The pay fixation formula recommended by the Sixth Central pay Commission as accepted by the Central Government shall be adopted for teaching faculty. The pay fixation in the 2006 AICTE pay scales shall be as indicated in the Fitment Tables given in Appendix-I to IV.

2. **INCREMENTS :**

   Each annual increment shall be equivalent to 3% of the sum total of the pay in the relevant Pay Band and the AGP as applicable for the stage in the Pay Band.

3. **ALLOWANCES :**

   The HRA, CCA and all other allowances, benefits such as leave/study leave, leave travel facilities, Medical reimbursement and pensionary benefits shall continue to be applicable as admissible to State Government employees.

4. **DA :**

   The DA in the revised AICTE pay scales shall be as follows :

   1-4-2011 – 51% of Basic Pay.

   1-7-2011 – 58% of Basic Pay.

5. **RETIREMENT AGE :**

   The retirement age shall continue to be 60 years as applicable to other State Government employees.

**6. DATE OF EFFECT :**

The revised AICTE pay scales shall be extended with effect from 01-04-2011.

**Recruitment Procedure :** In Notification No. DPAR 08 SRD 1993, dated 03-12-1994 the C&R Rules have been published in respect of Homoeopathy Collegiate Branch coming under the Department of AYUSH. In Notification No. DPAR 104 SRD 1994, dated 09-07-1999 the C&R Rules have been published in respect of Collegiate Branch of Teaching Cadre excluding Homoeopathy Teaching Cadre coming under the Department of AYUSH. These rules have been extended in Government Notification No. HFW 255 PTD 2004, dated 28-03-2005 and Notification No. HFW 104 PTD 2009, dated 08-06-2010 till 11-07-2011.

**Faculty Norms :** The qualifications prescribed in the existing C&R Rules are applicable till 11-07-2011.

**The measures for maintenance of standard of education :** The teaching faculty and infrastructure of the 5 Aided Ayurveda Medical Colleges coming under the Department of AYUSH shall be on par with the recommendation of the Apex Bodies like Central Council of Indian Medicines/Central Council of Homoeopathy, New Delhi. Any changes made in the Standard of Education from time to time by the Apex Bodies shall be scrupulously followed by the Department of AYUSH.

This order issues with the concurrence of the Finance Department vide Note No.; FD 20 SRP 2011, dated 21-04-2011.

By Order and in the name of the Governor of Karnataka,
**K.N. HARINIYAMMA**
Under Secretary to Government
Health and Family Welfare Department

## APPENDIX-I

### FITMENT TABLE
### LECTURER

Government Order No. HFW 178 PTD 2010 dated :

| Pre-Revised Scale : ₹ 8000-275-13500 | | | | |
|---|---|---|---|---|
| Revised Pay Band : ₹ 15600-39100+AGP ₹ 6000 | | | | |
| Sl. No. | Pre-Revised Basic Pay (In ₹) | Revised pay | | |
| | | Pay in Pay Band (In ₹) | AGP (In ₹) | Revised Basic Pay (In ₹) |
| 1 | 8000 | 15600 | 6000 | 21600 |
| 2 | 8275 | 15600 | 6000 | 21600 |
| 3 | 8550 | 15910 | 6000 | 21910 |
| 4 | 8825 | 16420 | 6000 | 22420 |
| 5 | 9100 | 16930 | 6000 | 22930 |
| 6 | 9375 | 17440 | 6000 | 23440 |
| 7 | 9650 | 17950 | 6000 | 23950 |
| 8 | 9925 | 18470 | 6000 | 24470 |
| 9 | 10200 | 18980 | 6000 | 24980 |
| 10 | 10475 | 19490 | 6000 | 25490 |
| 11 | 10750 | 20000 | 6000 | 26000 |
| 12 | 11025 | 20510 | 6000 | 26510 |
| 13 | 11300 | 21020 | 6000 | 27020 |
| 14 | 11575 | 21530 | 6000 | 27530 |
| 15 | 11850 | 22050 | 6000 | 28050 |
| 16 | 12125 | 22560 | 6000 | 28560 |
| 17 | 12400 | 23070 | 6000 | 29070 |
| 18 | 12675 | 23580 | 6000 | 29580 |
| 19 | 12950 | 24090 | 6000 | 30090 |
| 20 | 13225 | 24600 | 6000 | 30600 |
| 21 | 13500 | 25110 | 6000 | 31110 |

**K.N. HARINIYAMMA**
Under Secretary to Government
Health and Family Welfare Department

## APPENDIX-II

**FITMENT TABLE**
**ASSISTANT PROFESSOR**

Government Order No. HFW 178 PTD 2010 dated :

| Pre-Revised Scale : ₹ 10000-15250 | | | | |
|---|---|---|---|---|
| Revised Pay Band : ₹ 15600-39100+AGP ₹ 8000 | | | | |
| Sl. No. | Pre-Revised Basic Pay (In ₹) | Revised pay | | |
| | | Pay in Pay Band (In ₹) | AGP (In ₹) | Revised Basic Pay (In ₹) |
| 1 | 10000 | 18600 | 8000 | 26600 |
| 2 | 10325 | 19210 | 8000 | 27210 |
| 3 | 10650 | 19810 | 8000 | 27810 |
| 4 | 10975 | 20420 | 8000 | 28420 |
| 5 | 11300 | 21020 | 8000 | 29020 |
| 6 | 11625 | 21630 | 8000 | 29630 |
| 7 | 11950 | 22230 | 8000 | 30230 |
| 8 | 12275 | 22840 | 8000 | 30840 |
| 9 | 12600 | 23440 | 8000 | 31440 |
| 10 | 12925 | 24050 | 8000 | 32050 |
| 11 | 13250 | 24650 | 8000 | 32650 |
| 12 | 13575 | 25250 | 8000 | 33250 |
| 13 | 13900 | 25860 | 8000 | 33860 |
| 14 | 14225 | 26460 | 8000 | 34460 |
| 15 | 14550 | 27070 | 8000 | 35070 |
| 16 | 14875 | 27670 | 8000 | 35670 |
| 17 | 15200 | 28280 | 8000 | 36280 |

**K.N. HARINIYAMMA**
Under Secretary to Government
Health and Family Welfare Department

## APPENDIX-III

**FITMENT TABLE**
**PROFESSOR**

Government Order No. HFW 178 PTD 2010 dated :

| Pre-Revised Scale : ₹ 14300-19250 | | | | |
|---|---|---|---|---|
| Revised Pay Band : ₹ 37400-67000+AGP ₹ 10000 | | | | |
| Sl. No. | Pre-Revised Basic Pay (In ₹) | Revised | | |
| | | Pay in Pay Band (In ₹) | AGP (In ₹) | Revised Basic Pay (In ₹) |
| 1 | 14300 | 37400 | 10000 | 47400 |
| 2 | 14750 | 37400 | 10000 | 47400 |
| 3 | 15200 | 38530 | 10000 | 48530 |
| 4 | 15650 | 38530 | 10000 | 48530 |
| 5 | 16100 | 39690 | 10000 | 49690 |
| 6 | 16550 | 39690 | 10000 | 49690 |
| 7 | 17000 | 40890 | 10000 | 50890 |
| 8 | 17450 | 40890 | 10000 | 50890 |
| 9 | 17900 | 42120 | 10000 | 52120 |
| 10 | 18350 | 42120 | 10000 | 52120 |
| 11 | 18800 | 43390 | 10000 | 53390 |
| 12 | 19250 | 43390 | 10000 | 53390 |

**K.N. HARINIYAMMA**
Under Secretary to Government
Health and Family Welfare Department

## APPENDIX-IV
### FITMENT TABLE
### PRINCIPAL

Government Order No. HFW 178 PTD 2010 dated :

| Pre-Revised Scale : ₹ 14300-19250 | | | | |
|---|---|---|---|---|
| Revised Pay Band : ₹ 37400-67000+AGP ₹ 10000 | | | | |
| Sl. No. | Pre-Revised Basic Pay (In ₹) | Revised | | |
| | | Pay in Pay Band (In ₹) | AGP (In ₹) | Revised Basic Pay (In ₹) |
| 1 | 14300 | 37400 | 10000 | 47400 |
| 2 | 14750 | 37400 | 10000 | 47400 |
| 3 | 15200 | 38530 | 10000 | 48530 |
| 4 | 15650 | 38530 | 10000 | 48530 |
| 5 | 16100 | 39690 | 10000 | 49690 |
| 6 | 16550 | 39690 | 10000 | 49690 |
| 7 | 17000 | 40890 | 10000 | 50890 |
| 8 | 17450 | 40890 | 10000 | 50890 |
| 9 | 17900 | 42120 | 10000 | 52120 |
| 10 | 18350 | 42120 | 10000 | 52120 |
| 11 | 18800 | 43390 | 10000 | 53390 |
| 12 | 19250 | 43390 | 10000 | 53390 |

**K.N. HARINIYAMMA**
PR.594 Under Secretary to Government
Health and Family Welfare Department

## KANNADA & CULTURE, INFORMATION SECRETARIAT

**Sub :** Constitution of State level Monitoring and District level Monitoring Committees to oversee the enforcement of the Cable Television Networks (Regulation) Act 1995 and Rules framed there under orders – reg.

**Read :** 1. Letter D.O. No. 3102/1/2008-BC-11, dated:12-10-2011.
2. D.O. Letter No. FD 378 EXP/7/2010 dated : 07-05-2010.
3. Letter No. Vayee/chachivi/2010-11/6937, dated 6/8-7-2010.

**Preamble:**

As per the section 2 of the Cable Television Networks (Regulation) Act 1995, the District Magistrate or a Sub divisional Magistrate or a Commissioner of Police is designated as “authorized officer” within his local limits of Jurisdiction by State or Central Government. And as per section 11 and 12 of aforesaid Cable Act, the authorized officer has the power to seize and confiscate the equipment of the cable operator for violation of section 5 and 6 of the Cable TV Networks (Regulation) Act, 1995, i.e., violation of Programme Code and Advertisemtnt Code prescribed under Rule 6 and 7 of the Cable Television Network Rules 94 respectively. It has been noticed that the enforcement of the said act in many parts of the country is still not satisfactory either due to lack of clear under standing of the role to be played by the District Monitoring Committee or a suitable mechanism to enforce the provisions of the Act. An increasing number of petitions are being received in the Ministry of Information and Broad Casting, Government of India, from viewers regarding malpractices by Cable Operators and undesirable content being shown at the local level by the Cable Operators. As such it is most necessary in public interest that the District Level and State Level Monitoring Committees appreciate importance of their role and activate the mechanism to enforece the provisions of the Cable Television Networks (Regulation) Act 1995. In this background the Joint Secretary to Government of India Ministry of Information and Broadcasting in his letter read at (1) above has requested to constitute the State level Monitoring Committee and district level Monitoring Committees to oversee the enforcement of the Cable Television Networks (Regulation) Act 1995 and Rules framed there-under.

2 In the letter read at (2) above, the Secretary to Government, Finance Department has requested to constitute aforesaid committees as proposed by the Government of India.

3 The Director of Information, in his letter read at (3) above has also requested to set up the State and District Level Committees for effective implementation of the Cable Television Networks (Regulation) Act.

Hence the following Order.

**Government Order No. KCI 102 PIF 2009, Bangalore, Dated: 30th January 2012.**

4 Under the circumstances explained in the preamble, Government is pleased to constitute the State Level Monitoring Committee with the following members to enforce the provisions of Cable Television Networks (Regulation) Act 1995 and rules there under with immediate effect.

| | | |
|---|---|---|
| 1 | The Secrectary to Government, Kannada, Culture & Information Dept. | - Chairman |
| 2. | The DG & IGP or his nominee | - Member |
| 3. | The Principal Secretary to Government, Social Welfare Department or his Nominee. | - Member |
| 4. | The Principal Secretary to Government, Women & Child Development Department or his nominee. | - Member |
| 5. | Representative of a leading NGO of the State working for women (to be Nominated by Government) | - Member * |
| 6. | Academicians/Psychologists/Sociologists (one each to be nominated by Government) | - Member * |
| 7. | Director of Information, Bangalore | - Member Secretary |

* (Separate orders will be issued)

**5 The Functions of the State Level Monitoring Committee will be :-**

(a) to see whether the District Level Committees are meeting regularly.
(b) to see whether the authorized officers are effectively performing their duties.
(c) to see how many cases are handled by them and what decisions are arrived at
(d) to give suggestion/guidance to District level Committee.
(e) to take decision on the matters referred to it by the District level Committee.
(f) to collect data/information from District Level Committee and forward it to Secretary to Government of India, Ministry of Information and Broadcasting.
(g) to recommend action and forward complaints against satellite channels (National Channels) to the Ministry of Information & Broadcasting in cases of violation of Government of India's orders on the Programme and Advertising Codes.

6 The Committee shall meet at least once a year and submit a detailed annual report for the State, including District-wise data of Cable Operators registered within the State and estimated number of TV homes/viewers in the State to the Ministry of Information & Broadcasting, Government of India, New Delhi before 31st December each year.

7 Sanction is also accorded for the Constitution of District Level Monitoring Committees under the Chairmanship of Deputy Commissioners to oversee the enforcement of the Cable Television Networks (Regulation) Act 1995 and Rules framed there under.

**The Composition of District level Monitoring Committee is as below :-**

| | | |
|---|---|---|
| 1 | The Deputy Commissioner | - Chairman |
| 2 | The District Superintendent of Police | - Member |
| 3 | Principal of one of the Women's College in the District (to be selected by The DC) | - Member |
| 4 | Representative of a leading NGO working for Children welfare (to be nominated by the DC) | - Member |
| 5 | Academicians/Psychologists/Sociologists (one each to be nominated by the DC) | - Member |
| 6 | Representative of a leading NGO working for women welfare (to be nominated by the DC) | - Member |
| 7 | The Sr. Assistant Director/Assistant Director, Information Department of the District | - Member Secretary |

**8 The Functions of the Committee :-**

1 to provide a forum where the public may lodge a complaint regarding content aired over cable television and take action on the same as per procedure prescribed.

2 to review the action taken by Authorized Officers for enforcement of Cable Television Networks (Regulation) Act, 1995.

3 to immediately bring to the notice of State and Central Government if any programme is affecting public order or wide spread resentment in any community.

4 to keep a watch on content carried by cable television channels at local level and to ensure, through authorized Officers, that no unauthorized or pirated channels are carried and local news if aired by the cable television operator is restricted to information about local events and is presented in a manner which is balanced impartial and not likely to offend or incite any community.

5 to monitor the availability of free to air channels and channels notified for mandatory carriage on the cable network.

**9 Following procedure may be followed for handling the cases :**

(i) A Complaint Cell headed by a nodal Officer at District level should be established and wide publicity be given regarding the constitution of Monitoring Committee and procedure followed by it, including putting it on website of the State.

(ii) The Committee shall ordinarily meet once in two months to look into the complaints brought to its notice by individuals/organizations or take suo moto notice of violation of provisions of Cable TV Networks Rules, 1994.

(iii) In case the complaint concerns content carried locally by Cable TV Network at its own level, the Committee may call for footage/VCD of the programme/advertisement against which complaint is considered and the common pool of wisdom available within the Committee may form a view about whether a violation has taken place. In case the Committee is of the view that violation has taken place, the Authorized Officer may take action as per Section 11 of the Act after issuing show cause notice to the network and giving them an opportunity to be heard. The representation of the networks may also be placed before the Committee for final decision regarding the action to be taken on it by the Authorized Officer.

(iv) In case the complaint pertains to national/regional satellite channels, the Committee may forward its recommendations through the State-level Monitoring Committee to the Government of India. On receipt of such complaint the Central Government shall call for footage/VCD of the concerned programme/advertisement and take a view regarding the same in the inter-Ministerial Committee constituted in the Ministry of Information & Broadcasting. An advance copy of the recommendation may also be sent directly to the Central Government.

(v) Violations of programme and advertisement code are dealt with by the Central Government in the following manner depending on the seriousness of the violation :

(a) An advisory is given to the channel

(b) Warning is issued

(c) Channel is required to scroll an apology for a specified number of days

(d) Broadcast is suspended for specified time period.

10 The District Monitoring Committee can likewise take action against local cable operators in respect of content carried locally only. However, no such action may be taken at their level in respect of National/Regional Satelite Channels.

11 In case it is found that a cable network operator is not carrying channels prescribed for mandatory carriage or is carrying them in such a manner that the signal is too poor to be properly visible or audible, the Committee, through Athorized Officer, may direct the cable network to ensure proper carriage of the same and take any other action it may consider necessary under Section 11.

12 In exercise of the powers conferred under section 2 (a) of the Cable Television Networks (Regulation) Act 1995, the State Government, notify the following officers as "Authorized Officers" within local limits of Jurisdiction.

1. The Assistant Commissioners (Sub-Divisional Magistrate)
2. The Commissioner of Police, Bangalore.

13 The Authorised officers are empowered to size equipment used for operating the Cable Television Network under section 11 of the Cable Television Networks (Regulation) Act 1995. They can do so in cases of contravention of section 3,4A,5,6 or 8 of the Act in the following eventualities :-

(a) Operation of a Cable Television Network without registration in the local Post Office (Section-3).

(b) Transmission of pay channels on Cable Television without use of set Top Boxes (Addressable System) in areas notified for compulsory CAS (i.e.some parts of Chennai, Delhi, Mumbai and Kolkata) [Section 4A(1)]

(c) Non-carriage of free to air channels and mandatory channels as per list specified in Annexure-1 (Section 4A (2), Section 8)

(d) Charging fees in CAS areas which is higher than that fixed by TRAI as per Annexure-II & III [Section 4A(4)]

(e) Violation of Programme and Advertisement Codes (Section 5 and 6)

14 Under Section 19, the Authorize d Officer is also empowered to prohibit transmission of certain programmes in public interest if any programme or channel carried by it, is not in conformity with the prescribed programme code referred to in Section 5 and advertisement code referred to in Section 6 of the Act or if such programmed is likely to promote on grounds of religion, race, language, caste or community or any other ground whatsoever, disharmony or feelings or enmity, hatred or ill-will between different religious, racial, linguistic or regional groups or castes or communities or which is likely to disturb the public tranquility.

15 Kannada Version of this order will follow.

By Order and in the name of the Governor of Karnataka,

**K.Sudhakara Shetty**

Deputy Secretary to Government

Kannada & Culture, Information Department

PR.595

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** 16ನೇ ವೇತನ ಶ್ರೇಣಿಯನ್ನು ಹೊಂದಿರುವ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಉಪ ನಿರ್ದೇಶಕರುಗಳಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿ, ಹಿರಿಯ ವೇತನ ಶ್ರೇಣಿ ಮತ್ತು ಹೆಚ್ಚುವರಿ ವೇತನ ಬಡ್ತಿಯ ಸೌಲಭ್ಯಗಳನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪತ್ರ ಸಂಖ್ಯೆ: ಸಿಎಫ್‌ಎಸ್/ಇಎಸ್‌ಟಿ (1)122/2011-12, ದಿ:18.01.2012.

2. ಸರ್ಕಾರದ ಆದೇಶ ಸಂಖ್ಯೆ: ಆಇ 31 ಎಸ್‌ಆರ್‌ಪಿ 2010, ದಿ: 19.01.2011.

ಮೇಲೆ ಓದಲಾದ (1)ರ ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪತ್ರದಲ್ಲಿ ನೇರ ನೇಮಕಾತಿಯ ಮೂಲಕ ಇಲಾಖೆಗೆ ಆಯ್ಕೆಯಾದ ಉಪ ನಿರ್ದೇಶಕರುಗಳಿಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ (2)ರ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿ, ಹಿರಿಯ ವೇತನ ಶ್ರೇಣಿ ಮತ್ತು ಹೆಚ್ಚುವರಿ ವೇತನ ಬಡ್ತಿ ಸೌಲಭ್ಯಗಳನ್ನು ವಿಸ್ತರಿಸಿ ಆದೇಶಿಸಲಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಆದೇಶದನ್ವಯ ಅರ್ಹ ಉಪ ನಿರ್ದೇಶಕರುಗಳಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿ, ಹಿರಿಯ ವೇತನ ಶ್ರೇಣಿ ಮತ್ತು ಹೆಚ್ಚುವರಿ ವೇತನ ಬಡ್ತಿ ಸೌಲಭ್ಯಗಳನ್ನು ವಿಸ್ತರಿಸುವ ಸಂಬಂಧ ಸರ್ಕಾರದಿಂದ ಮರು ಆದೇಶ ಹೊರಡಿಸುವಂತೆ ಮಹಾಲೇಖಪಾಲರ ಕಛೇರಿಯಿಂದ ತಿಳಿಸಿರುವುದಾಗಿ ವಿವರಿಸುತ್ತಾ, ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಆಯುಕ್ತರು, ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆನಾಸ 27 ಆಇಸೇ 2012, ಬೆಂಗಳೂರು, ದಿನಾಂಕ: 09-02-2012**

16ನೇ ವೇತನ ಶ್ರೇಣಿ ರೂ. 14050-25050ನ್ನು ಹೊಂದಿರುವ ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯ ಉಪ ನಿರ್ದೇಶಕರ ಹುದ್ದೆಯಲ್ಲಿ ನೇರ ನೇಮಕಾತಿಯಿಂದ ನೇಮಕಗೊಂಡ ಅಧಿಕಾರಿಗಳಿಗೆ ದಿನಾಂಕ: 01.01.2011 ರಿಂದ ಜಾರಿಗೆ ಬರುವಂತೆ ಕೆಳಕಂಡ ಸೌಲಭ್ಯಗಳನ್ನು ವಿಸ್ತರಿಸಿ ಆದೇಶಿಸಲಾಗಿದೆ.

1) 10 ವರ್ಷಗಳ ಸೇವೆಯನ್ನು ಪೂರೈಸಿದ್ದಕ್ಕಾಗಿ 1983ರ ಕರ್ನಾಟಕ ನಾಗರಿಕ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳಡಿಯಲ್ಲಿ, ಅದರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ರೂ. 15200-25650 ಗಳ ಆಯ್ಕೆಕಾಲಿಕ ವೇತನ ಶ್ರೇಣಿ;

2) 15 ವರ್ಷಗಳ ಸೇವೆಯನ್ನು ಪೂರೈಸಿದ್ದಕ್ಕಾಗಿ 1991ರ ಕರ್ನಾಟಕ ನಾಗರಿಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳಡಿಯಲ್ಲಿ, ಅದರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟು ಹಿರಿಯ ವೇತನ ಶ್ರೇಣಿ;

3) ಒಂದೂ ಪದೋನ್ನತಿಯನ್ನು ಪಡೆಯದೆ ಉಪ ನಿರ್ದೇಶಕರ ಹುದ್ದೆಯಲ್ಲಿ 20 ವರ್ಷಗಳ ಸೇವೆಯನ್ನು ಪೂರೈಸಿದವರಿಗೆ ದಿನಾಂಕ: 9ನೇ ಮೇ 2002ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002 ರನ್ವಯ ಒಂದು ಹೆಚ್ಚುವರಿ ವೇತನ ಬಡ್ತಿ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 31 ಎಸ್‌ಆರ್‌ಪಿ 2010, ದಿನಾಂಕ: 19.01.2011 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಮಹಾದೇವ**

ಪೀಠಾಧಿಕಾರಿ (ಆಹಾರ-1)

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

ಪಿ.ಆರ್. 596

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ತುಕಾರಾಂ, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ; ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಆಇ 47 ರಾಲೆಪ 2006, ದಿನಾಂಕ: 18.01.2011.
2. ಶ್ರೀ ನಿಸಾರ್ ಅಹ್ಮದ್ ಪಟವೇಗಾರ್, ಜಂಟಿ ನಿಯಂತ್ರಕರು ಹಾಗೂ ಮುಖ್ಯ ಲೆಕ್ಕಾಧಿಕಾರಿ ಜಿಲ್ಲಾ ಪಂಚಾಯತ್, ಗುಲ್ಬರ್ಗಾ ಅವರ ಪತ್ರ ಸಂಖ್ಯೆ:ಜಿಪಗು/ಮುಲೆಅ/ಇ.ವಿ/2011-12/140 ದಿ:13/14.6.2011.
3. ನೋಟೀಸ್ ಸಂಖ್ಯೆ: ಆಇ 47 ರಾಲೆಪ 2006 ದಿ: 4.7.2011.
4. ಶ್ರೀ ತುಕಾರಾಂ, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಉತ್ತರ ದಿ: 20.7.2011.
5. ಕರ್ನಾಟಕ ಲೋಕಸೇವಾ ಆಯೋಗದ ದಿ: 17.1.2012ರ ಪತ್ರ ಸಂಖ್ಯೆ: PSC 163 CNS 11.

**ಪ್ರಸ್ತಾವನೆ :**

ಬೀದರ್ ಜಿಲ್ಲಾ ಪಂಚಾಯತ್‌ನಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಮಾರ್ಚ್ 2005ರಲ್ಲಿ ನಗದೀಕರಿಸಿದ ಜೆರಾಕ್ಸ್ ಯಂತ್ರದ ಖರೀದಿ ಮೊತ್ತ ರೂ. 98,506/-ಗಳನ್ನು ಕಂಪನಿಗೆ ಪಾವತಿಸದೇ ದಿ: 22.10.2005ರವರೆಗೂ ತನ್ನಲ್ಲೇ ಇಟ್ಟುಕೊಂಡಿದ್ದ; ಕಚೇರಿಯ ವಾಹನಕ್ಕೆ 2005ರ ಏಪ್ರಿಲ್‌ನಿಂದ ಆಗಸ್ಟ್‌ವರೆಗೆ ಇಂಧನ ಸರಬರಾಜು ಮಾಡಿದ 5 ಬಿಲ್‌ಗಳ ಮೊತ್ತ ರೂ. 76,003/-ಗಳನ್ನು ಡ್ರಾ ಮಾಡಿ ಪಾವತಿಸದೆ ಇಂಧನ ದೊರೆಯದ ಸ್ಥಿತಿ ಉಂಟು ಮಾಡಿದ; ಕಚೇರಿ ಮತ್ತು ಅಧಿಕಾರಿಗಳ ನಿವಾಸದ ದೂರವಾಣಿ ಬಿಲ್‌ಗಳನ್ನು ಡಿ.ಸಿ.ಬಿಲ್ ಮೂಲಕ ಪಾವತಿಸದೇ ದೂರವಾಣಿ ಸಂಪರ್ಕಗಳು ಕಡಿತಗೊಳ್ಳಲು ಕಾರಣರಾದ; ಜಿಲ್ಲಾ ಪಂಚಾಯತ್ ನ್ಯಾಯವಾದಿಗಳ ರಿಟೇನರ್ ಫೀಗಳನ್ನು ಪಾವತಿಸುವಂತೆ ಹೊರಡಿಸಲಾದ ಆದೇಶವನ್ನು ಅನುಷ್ಠಾನಗೊಳಿಸಲು ವಿಫಲರಾದ; ಜಿಲ್ಲಾ ಪಂಚಾಯತ್ ಊಟೋಪಚಾರ, ಲೇಖನ ಸಾಮಗ್ರಿಗಳ ಖರೀದಿ, ವಾಹನ ದುರಸ್ತಿ ಇತ್ಯಾದಿಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿದ್ದರೂ ಸಹ ಅವುಗಳನ್ನು ಪಾವತಿಸದೇ ಉಳಿದ; ನಿವೃತ್ತಿ ಹೊಂದುತ್ತಿರುವ ತಮ್ಮ ಬೇಬಾಕಿ ಪತ್ರಕ್ಕೆ ತಾವೇ ಸಹಿ ಹಾಕಿಕೊಂಡು; ವರ್ಷಾನುಗಟ್ಟಲೇ ನಗದು ಪುಸ್ತಕವನ್ನು ಬರೆಯದೇ ಹಾಗೂ ಬರೆಯುವುದನ್ನು ಉಸ್ತುವಾರಿ ವಹಿಸದೇ ಜಿಲ್ಲಾ ಪಂಚಾಯತ್‌ನ

ನಿಧಿಯನ್ನು ತಾತ್ಕಾಲಿಕವಾಗಿ ದುರುಪಯೋಗ ಪಡಿಸಿಕೊಂಡ ಆರೋಪಗಳಿಗಾಗಿ ಇನ್ನೊಬ್ಬರೊಡನೆ ಶ್ರೀ ತುಕಾರಾಂ, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ 18.1.2011ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ನಿಸಾರ್ ಅಹ್ಮದ್ ಪಟವೇಗಾರ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿ: 13.6.2011ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು;

"ಝೆರಾಕ್ಸ್ ಯಂತ್ರ ಸರಬರಾಜು ಮಾಡಿದ ಮೊತ್ತ ರೂ. 98,506/–ಗಳನ್ನು ನಗದು ಪುಸ್ತಕದ ಪುಟ–41ರನ್ವಯ ದಿ: 29.3.2005ರಂದು ಆರೋಪಿಗಳು ಡ್ರಾ ಮಾಡಿದ್ದಾರೆ. ಸದರೀ ಮೊತ್ತದ ಪೈಕಿ ರೂ. 88,507/–ಗಳನ್ನು ಬೆಂಗಳೂರಿನ ಮೋದಿ ಝರಾಕ್ಸ್ ಕಂಪನಿಗೆ ನಗದು ಪುಸ್ತಕ ಪುಟ ಸಂಖ್ಯೆ 81ರನ್ವಯ ದಿ: 30.11.2005ರಂದು ಪಾವತಿಸಿದ್ದಾರೆ. 8 ತಿಂಗಳು ತಮ್ಮಲ್ಲೇ ಉಳಿಸಿಕೊಂಡು ನಂತರವೂ ರೂ. 9999/–ಗಳನ್ನು ಪಾವತಿಸದೇ ಕಚೇರಿಯಲ್ಲೇ ಉಳಿದಿದೆ. ಇದು ತಾತ್ಕಾಲಿಕ ದುರುಪಯೋಗ ಆಗಿದ್ದು ಒಂದನೇ ಆರೋಪ ಸಾಬೀತಾಗಿದೆ; ವಿಳಂಬವಾಗಿ ಪಾವತಿಸಿದ ವಾಹನ ಸಂಖ್ಯೆ: ಎಂವೈಐ 8282ರ 5 ಬಿಲ್‌ಗಳನ್ನು ಹಾಗೂ ಕಚೇರಿ, ಅಧಿಕಾರಿಗಳ ನಿವಾಸಗಳ ದೂರವಾಣಿ ಬಿಲ್ ಪಾವತಿಗೆ ಸಂಬಂಧಿಸಿದ ಕಡತಗಳು ಹಾಗೂ ಇತರ ದಾಖಲೆಗಳನ್ನು ವಿಚಾರಣೆಗೆ ಹಾಜರುಪಡಿಸಲಿಲ್ಲ. ಇದರಿಂದಾಗಿ ಜವಾಬ್ದಾರಿ ನಿಗದಿಪಡಿಸಲು ಸಾಧ್ಯವಿಲ್ಲ. ಎರಡು ಹಾಗೂ ಮೂರನೇ ಆರೋಪಗಳು ಸಾಬಿತಾಗಿಲ್ಲ; ಶ್ರೀ ಜಿ.ಆರ್. ರಾಮಚಂದ್ರ ನ್ಯಾಯವಾದಿಗಳ ರಿಟೆನರ್ ಫೀ ಪೈಕಿ ರೂ. 6000/–ಗಳನ್ನು ದಿ: 9.3.2005ರಂದು ರೂ. 4000/–ಗಳನ್ನು ದಿ: 22.6.2005ರಂದೂ ಒಟ್ಟು ರೂ. 10,000/–ಗಳನ್ನು ನಗದು ಪುಸ್ತಕದ ಪುಟ ಸಂಖ್ಯೆ: 36 ಮತ್ತು 52ರ ಪ್ರಕಾರ ಡ್ರಾ ಮಾಡಲಾಗಿದೆ. ಆದರೆ ಅವರಿಗೆ ಪಾವತಿ ಮಾಡಿರುವುದಿಲ್ಲ. ಶ್ರೀಮತಿ ಟಿ.ಎನ್. ಮಂಜುಳಾದೇವಿ, ನ್ಯಾಯವಾದಿಗಳ 2005ರ ಮೇ ರಿಂದ ಜುಲೈ ವರೆಗಿನ ರಿಟೇನರ್ ಫೀ ಮೊತ್ತವನ್ನು ದಿ: 19.9.2005ರಂದು ನಗದು ಪುಸ್ತಕ ಪುಟ ಸಂಖ್ಯೆ: 71ರನ್ವಯ ಡ್ರಾ ಮಾಡಿ ವಿಳಂಬವಾಗಿ ಪಾವತಿಸಲಾಗಿದೆ. ಆದ್ದರಿಂದ 4ನೇ ಆರೋಪವು ಸಾಬೀತಾಗಿದೆ; ವಿವಿಧ ಬಿಲ್‌ಗಳಿಗೆ ಸಂಬಂಧಿಸಿದ ಚೆಕ್ ಸಂಖ್ಯೆ ಹಾಗೂ ವಿವರಗಳ ಪಟ್ಟಿಯನ್ನು ಮಾತ್ರ ವಿಚಾರಣೆಗೆ ಹಾಜರುಪಡಿಸಲಾಗಿದೆ. ಆರೋಪದಲ್ಲೂ ಸಹ ಎಷ್ಟು ದಿನ ವಿಳಂಬವಾಗಿ ಪಾವತಿಸಲಾಯಿತು ಎಂಬ ಬಗ್ಗೆ ಸ್ಪಷ್ಟ ಉಲ್ಲೇಖ ಇಲ್ಲ. ಇದರಿಂದಾಗಿ ವಿಳಂಬವಾಗಿ ಪಾವತಿಸಿದ ಹಾಗೂ ಪಾವತಿಸದೇ ಇರುವ ಬಿಲ್‌ಗಳ ವಿವರ, ಮೊತ್ತ ಇತ್ಯಾದಿಗಳ ಬಗ್ಗೆ ನಿಖರ ಮಾಹಿತಿ ದೊರೆಯುವುದಿಲ್ಲ. ಆದ್ದರಿಂದ 5ನೇ ಆರೋಪ ಸಾಬೀತಾಗುವುದಿಲ್ಲ; ಮಂಡನಾಧಿಕಾರಿಗಳಿಂದ ಹಾಜರು ಪಡಿಸಲ್ಪಟ್ಟ ದಾಖಲಾತಿಗಳನ್ನು ಆರೋಪಿಯು ನೋಡಿದ್ದು 8 ತಿಂಗಳ ಹಿಂದೆ ವಿವಿಧ ಬಾಬ್ತುಗಳಲ್ಲಿ ಡ್ರಾ ಮಾಡಿ ಪಾವತಿ ಆಗದೇ ಉಳಿದ ರೂ. 3,47,920/– ಶಿಲ್ಕು ಇರುವುದನ್ನು ಹಾಗೂ ಒಂದು ವರ್ಷದಿಂದ ನಗದು ಪುಸ್ತಕದಲ್ಲಿ ನಮೂದುಗಳನ್ನು ಮಾಡದೇ ಇರುವುದನ್ನು ಆರೋಪಿಯು ಒಪ್ಪಿಕೊಂಡಿದ್ದಾರೆ. ಈ ಮೊತ್ತವು ಜಿಲ್ಲಾ ಪಂಚಾಯತ್‌ನ ಮಾಜಿ ಅಧ್ಯಕ್ಷ/ಉಪಾಧ್ಯಕ್ಷರ ಗೌರವಧನ, ಪ್ರಯಾಣ ಭತ್ಯೆ, ಖಾಯಂ ಮುಂಗಡ ಶಿಲ್ಕು, ಎ.ಸಿ.ಬಿಲ್ ಮೊತ್ತ ಹಾಗೂ ಖಜಾನೆಯಿಂದ ಡ್ರಾ ಮಾಡಿ ಸಂಬಂಧಿಸಿದವರಿಗೆ ಪಾವತಿಸದೇ ಇರುವ ಮೊತ್ತಗಳನ್ನು ಒಳಗೊಂಡಿದೆ. ಆದ್ದರಿಂದ 6ನೇ ಆರೋಪ ಸಾಬೀತಾಗಿದೆ".

ಮೇಲಿನ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ ಶ್ರೀ ತುಕಾರಾಂ, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿ: 4.7.2011ರ ಎರಡನೇ ನೋಟೀಸ್ ನೀಡಿ ವಿಚಾರಣಾಧಿಕಾರಿಗಳ ನಿರ್ಣಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಈ ನೋಟೀಸ್‌ಗೆ ಶ್ರೀ ತುಕಾರಾಂ ಅವರು ಮೆಲೆ (4)ರಲ್ಲಿ ಓದಲಾದ ದಿ: 20.7.2011ರಲ್ಲಿ ಉತ್ತರ ಸಲ್ಲಿಸಿ, ಅಂದಿನ ಬೀದರ್ ಜಿಲ್ಲಾ ಪಂಚಾಯತ್ ಮುಖ್ಯ ಲೆಕ್ಕಾಧಿಕಾರಿಗಳು ಪಾರ್ಶ್ವವಾಯು ಪೀಡಿತವಾದ ನನ್ನನ್ನು ಬ್ಲಾಕ್‌ಮೇಲ್‌ಗೆ ಒಳಪಡಿಸಿ ಹಾಗೂ ಕ್ಯಾಷಿಯರ್‌ಗೆ ಹೆದರಿಸಿ ಬಿಲ್‌ಗಳನ್ನು ಕಮೀಷನ್ ಪಡೆಯುವ ಸಲುವಾಗಿ ಪೆಂಡಿಂಗ್ ಇಟ್ಟುಕೊಂಡು ಅವರೇ ವಿಳಂಬ ಮಾಡಿದ್ದಾರೆಂದು ತಿಳಿಸಿದ್ದಾರೆ. ನ್ಯಾಯವಾದಿಗಳಿಬ್ಬರಿಗೂ ತಾನೇ ಹಣ ಪಾವತಿ ಮಾಡುವುದಾಗಿ ಕ್ಯಾಷಿಯರ್‌ರಿಂದ ಮುಖ್ಯ ಲೆಕ್ಕಾಧಿಕಾರಿಯವರೇ ಹಣ ಪಡೆದು ಬೆಂಗಳೂರಿಗೆ ಪ್ರತಿ ತಿಂಗಳೂ ಹೋಗುತ್ತಿದ್ದರು. ಆದರೆ ಹಣ ತಲುಪಿದ ಬಗ್ಗೆ ನ್ಯಾಯವಾದಿಗಳಿಂದ ರಸೀತಿ ಪಡೆದು ಲೆಕ್ಕ ಪತ್ರ ವಿಭಾಗಕ್ಕೆ ಸಲ್ಲಿಸದ ಕಾರಣ ಮುಖ್ಯ ಲೆಕ್ಕಾಧಿಕಾರಿಗಳು ರಿಟೆನ್ಷನ್ ಫೀ ಪಾವತಿ ಮಾಡದಿರುವುದಕ್ಕೆ ಕಾರಣವೆಂದು ತಿಳಿಸಿದ್ದಾರೆ. ಪೆನ್ಷನ್ ಪೇಪರ್‌ಗಳನ್ನು ಮಹಾಲೇಖಪಾಲರಿಗೆ ಸಲ್ಲಿಸುವ ಸಲುವಾಗಿ ಬೇಬಾಕಿ ಪತ್ರ ನೀಡುವಂತೆ ಕೋರಿ ದಿ: 18.11.2005ರಂದು ತಾನು ಸಲ್ಲಿಸಿದ ಅರ್ಜಿಯನ್ನು ಮುಖ್ಯ ಲೆಕ್ಕಾಧಿಕಾರಿಗಳು ಅವರ ಬಳಿಯೇ ಇಟ್ಟುಕೊಂಡು ಇವರಿಗೆ ಕಮೀಷನ್ ನೀಡುವಂತೆ ಕೇಳಿದರು. ಆದ್ದರಿಂದ ನನ್ನ ಬೇಬಾಕಿ ಪತ್ರಕ್ಕೆ ನಾನೇ ಸಹಿ ಮಾಡಿ ಮಹಾಲೇಖಪಾಲರಿಗೆ ಕಳುಹಿಸಿದ್ದಾಗಿ ತಿಳಿಸಿ ಈ ಅಕ್ರಮಕ್ಕೆ ಮುಖ್ಯ ಲೆಕ್ಕಾಧಿಕಾರಿಗಳೇ ಕಾರಣ ಎಂದು ತಿಳಿಸಿದ್ದಾರೆ. ಪ್ರತಿ ತಿಂಗಳೂ ಮುಂಗಡವಾಗಿ ಕ್ಯಾಷಿಯರ್‌ನಿಂದ ಮುಖ್ಯ ಲೆಕ್ಕಾಧಿಕಾರಿಗಳು 15 ರಿಂದ 20 ಸಾವಿರ ರೂ.ಗಳವರೆಗೆ ಪಡೆಯುತ್ತಿದ್ದರು. ಆದರೆ ಅದಕ್ಕೆ ಯಾವುದೇ ಓಚರ್‌ಗಳನ್ನು ಕ್ಯಾಷಿಯರ್‌ಗೆ ಕೊಡುತ್ತಿರಲಿಲ್ಲ. ಓಚರ್‌ಗಳಿಲ್ಲದೇ ನಗದು ಪುಸ್ತಕ ಬರೆಯಲು ಸಾಧ್ಯವಿಲ್ಲದ ಕಾರಣ ಕ್ಯಾಷಿಯರ್ ನಗದು ಪುಸ್ತಕ ಬರೆಯುತ್ತಿರಲಿಲ್ಲ. ಪ್ರತಿ ದಿನವೂ ನಗದು ಪುಸ್ತಕ ಬರೆಯುವಂತೆ ಕ್ಯಾಷಿಯರ್‌ಗೆ ನಾನು ಹಲವಾರು ಮೆಮೋಗಳನ್ನು ಕೊಟ್ಟಿದ್ದು ಅದರ ಪ್ರತಿಯನ್ನು ಮುಖ್ಯಲೆಕ್ಕಾಧಿಕಾರಿಗೂ ಗುರುತಿಸಿದ್ದೇನೆ. ಆದಾಗ್ಯೂ ಅವರು ಕ್ಯಾಷಿಯರ್‌ನ್ನು ಹೆದರಿಸಿ ಹಣವನ್ನು ಆಗಿಂದ್ದಾಗ್ಗೆ ಪಡೆದು ಓಚರ್ / ರಸೀತಿ ನೀಡದೇ ನಗದು ಪುಸ್ತಕ ಬರೆಯದೇ ಇರಲು ಕಾರಣರಾಗಿದ್ದಾರೆಂದು ತಿಳಿಸಿ ಈ ಅವ್ಯವಹಾರಗಳಿಗೆ ತಾವು ಕಾರಣರಲ್ಲವೆಂದು ಪ್ರತಿಪಾದಿಸಿದ್ದಾರೆ.

ಆರೋಪಿತ ಅಧಿಕಾರಿಯ ವಿವರಣೆಯಿಂದಾಗಿ ದಾಖಲೆಗಳೊಡನೆ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ಆರೋಪಿಯು ಈಗ ಪ್ರಸ್ತಾಪಿಸಿರುವ ಯಾವುದೇ ಅಂಶವನ್ನು ವಿಚಾರಣಾಧಿಕಾರಿಗಳ ಮುಂದೆ ವಿಚಾರಣೆ ಸಮಯದಲ್ಲಿ ಪ್ರಸ್ತಾಪಿಸಿರಲಿಲ್ಲ. ಅವರ ವಿರುದ್ಧ ಸಾಬೀತಾಗಿದೆ ಎಂದು ನಿರ್ಣಯಿಸಲಾದ 1,4,6 ಮತ್ತು 7ನೇ ಆರೋಪಗಳಿಗೆ ಸಂಬಂಧಪಟ್ಟಂತೆ ದಾಖಲೆಗಳನ್ನು ಹಾಜರುಪಡಿಸಿದಾಗಲೂ ಸಹ ಈ ಅಂಶಗಳನ್ನು ಮಂಡಿಸಿಲ್ಲ. ಅಕ್ರಮಗಳಿಗೆ ಎರಡನೇ ಆರೋಪಿ ಮತ್ತು ಮುಖ್ಯ ಲೆಕ್ಕಾಧಿಕಾರಿಗಳು ಜವಾಬ್ದಾರರೆಂದು ಪ್ರತಿಪಾದಿಸಿದ್ದಾರೆ. ಹಣ ದುರುಪಯೋಗಕ್ಕೆ ಸಂಬಂಧಿಸಿದಂತೆ ಮುಖ್ಯ ಲೆಕ್ಕಾಧಿಕಾರಿಗಳ ಬೆದರಿಕೆ ತಂತ್ರಕ್ಕೆ ಒಳಗಾಗಿ ಎರಡನೇ ಆರೋಪಿಯಿಂದ ಬರೆದ ನಗದು ಪುಸ್ತಕಕ್ಕೆ ಸಹಿ ಮಾಡಿದ್ದೇನೆ ಎಂದು ತಿಳಿಸಿದ್ದಾರೆ. ಅಕ್ರಮಗಳಿಗೆ ಮುಖ್ಯ ಲೆಕ್ಕಾಧಿಕಾರಿಗಳೂ ಕಾರಣರು ಎಂದು ತಿಳಿಸಿರುವುದು ಒಂದು after thought ಆಗಿದೆ. ಆರೋಪಿಗಳು ಯಾವುದನ್ನು ಪ್ರಮಾದವಶಾತ್ ತಮ್ಮಿಂದ ಉಂಟಾದ ತಪ್ಪು ಎಂದು ಬಣ್ಣಿಸುತ್ತಾರೋ ಅವು ವಾಸ್ತವದಲ್ಲಿ ಅಕ್ರಮಗಳಾಗಿವೆ ಹಾಗೂ ತಾತ್ಕಾಲಿಕ ಹಣ ದುರುಪಯೋಗ ಸಾಬೀತಾದ ಪ್ರಕರಣಗಳಾಗಿವೆ. ವಿಚಾರಣೆಯು ಸಮರ್ಪಕವಾಗಿ ನಡೆದಿದೆ. ಆರೋಪಿಗಳಿಗೆ ವಿಪುಲವಾದ ಅವಕಾಶವನ್ನು

ವಿಚಾರಣಾಧಿಕಾರಿಗಳು ನೀಡಿದ್ದಾರೆ. ಆದ್ದರಿಂದ ಆರೋಪಿಯ ವಿವರಣೆಯನ್ನು ಒಪ್ಪಿಕೊಳ್ಳದೇ 1, 4, 6 & 7ನೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ಇವರಿಗೆ ಸೂಕ್ತ ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 47 ರಾಲೆಪ 2006, ಬೆಂಗಳೂರು, ದಿನಾಂಕ: 02.02.2012**

ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 214(1)(ಎ)ರನ್ವಯ, ಶ್ರೀ ತುಕಾರಾಮ್, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಮಾಸಿಕ ವಿಶ್ರಾಂತಿ ವೇತನದ ಶೇ. 20ರಷ್ಟು ಮೊತ್ತವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ 5 ವರ್ಷಗಳವರೆಗೆ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಲ್. ರಮೇಶ**
ಸರ್ಕಾರದ ಅಧೀನ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಪಿ.ಆರ್. 597

## ಆರ್ಥಿಕ ಸಚಿವಾಲಯ

**ವಿಷಯ :** ಜಂಟಿ ಇಲಾಖಾ ವಿಚಾರಣೆ – 1) ಶ್ರೀ ಜಯದೃತ ಶೃಂಗೇರಿ, ಸಹಾಯಕ ಖಜಾನಾಧಿಕಾರಿ, 2) ಶ್ರೀ ಅಂಬರಾಯ ಪವಾರ್, ಮುಖ್ಯ ಲೆಕ್ಕಿಗರು ಹಾಗೂ 3) ಶ್ರೀ ದೇವೇಂದ್ರಪ್ಪ, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಇವರುಗಳ ವಿರುದ್ಧ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಡಿ 19 ಡಿಜಿಡಿ 2003 ದಿ: 27.3.2008.
2) ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ ಇವರ ವಿಚಾರಣಾ ವರದಿ ಸಂಖ್ಯೆ: LOK/ARE-4/14-A/ENQ-11/2008 ದಿ: 21.2.2011.
3) ಕರ್ನಾಟಕ ಲೋಕಾಯುಕ್ತರ ಪತ್ರ ಸಂಖ್ಯೆ: LOK/ARE-4/ENQ-11/2008 ದಿ: 5.4.2011.
4) ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಆಇ 142 ಆಖಇ 2011 ದಿ: 26.8.2011
5) ಶ್ರೀ ಜಯದೃತ ಶೃಂಗೇರಿ, ಸಹಾಯಕ ಖಜಾನಾಧಿಕಾರಿ, ಖಜಾನೆ ಇಲಾಖೆ ಇವರ ಉತ್ತರ ದಿ: 10.10.2011.
6) ಶ್ರೀ ಅಂಬರಾಯ ಪವಾರ್, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಇವರ ಉತ್ತರ ದಿ: 13.10.2011.
7) ಶ್ರೀ ದೇವೇಂದ್ರಪ್ಪ, ಪ್ರಥಮ ದರ್ಜೆ ಸಹಾಯಕ, ಖಜಾನೆ ಇಲಾಖೆ ಇವರ ಉತ್ತರ ದಿ: 12.10.2011.

**ಪ್ರಸ್ತಾವನೆ :**

ಗುಲ್ಬರ್ಗಾದ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಯಲ್ಲಿ ಅಮಾನತ್ತಿನಲ್ಲಿದ್ದ ಸಿಬ್ಬಂದಿಯ ವೇತನವನ್ನು ಸೆಳೆಯಲು ಅಲ್ಲಿನ ಕ್ಷೇತ್ರ ಶಿಕ್ಷಣಾಧಿಕಾರಿಯೊಡನೆ ಶಾಮೀಲಾಗಿ ಖಜಾನೆಗೆ ಸಲ್ಲಿಸಲ್ಪಟ್ಟ ಬಿಲ್‌ಗಳನ್ನು ಸಮರ್ಪಕವಾದ ಪರಿಶೀಲನೆಗೆ ಒಳಪಡಿಸದೇ ಅವುಗಳನ್ನು ಪಾಸ್ ಮಾಡಿ ರೂ. 43,84,851/–ಗಳು ದುರುಪಯೋಗವಾಗಲು ಕಾರಣರಾಗಿ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಗುಲ್ಬರ್ಗಾ ಜಿಲ್ಲಾ ಖಜಾನೆಯ ಹಿಂದಿನ ಸಹಾಯಕ ಖಜಾನಾಧಿಕಾರಿ ಶ್ರೀ ಜಯದೃತ ಶೃಂಗೇರಿ, ಮುಖ್ಯ ಲೆಕ್ಕಿಗ ಶ್ರೀ ಅಂಬಾರಾಯ ಪವಾರ್ ಹಾಗೂ ಪ್ರಥಮ ದರ್ಜೆ ಸಹಾಯಕ ಶ್ರೀ ದೇವೇಂದ್ರಪ್ಪ ಅವರುಗಳ ವಿರುದ್ಧ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನಂತೆ ಶಿಕ್ಷಣ ಇಲಾಖೆಯು ಮೇಲೆ (1)ರಲ್ಲಿ ಓದಲಾದ ದಿ: 27.3.2008ರ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಿತು. ಅದರಂತೆ ಸನ್ಮಾನ್ಯ ಲೋಕಾಯುಕ್ತರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ ಅವರು ಆರೋಪಿಗಳ ಮೇಲೆ ನೋಟೀಸ್, ದೋಷಾರೋಪಣೆ ಇತ್ಯಾದಿಗಳನ್ನು ಜಾರಿ ಮಾಡಿ ವಿಚಾರಣೆ ನಡೆಸಿ ಮೇಲೆ (2) ರಲ್ಲಿ ಓದಲಾದ ದಿ: 21.2.2011ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಜಿಲ್ಲಾ ಪಂಚಾಯತ್‌ನಿಂದ ಬಿಡುಗಡೆಯಾದ ವೇತನಾನುದಾನವನ್ನು ಸೆಳೆಯಲು ಡ್ರಾಯಿಂಗ್ ಅಧಿಕಾರಿಯಿಂದ ಖಜಾನೆಗೆ ಸಲ್ಲಿಸಲ್ಪಟ್ಟ ಬಿಲ್‌ಗಳನ್ನು ಪಾಸ್ ಮಾಡುವ ಮುನ್ನ ಖಜಾನೆಯಲ್ಲಿ ಅನುಸರಿಸಬೇಕಾದ ವಿಧಿವಿಧಾನ ಕುರಿತು ಕರ್ನಾಟಕ ಖಜಾನೆ ಸಂಹಿತೆಯ ಅನುಚ್ಛೇದ 24(6) ಮತ್ತು 93(5)ರಲ್ಲಿ ಹಾಗೆಯೇ ಕರ್ನಾಟಕ ಜಿಲ್ಲಾ ಪಂಚಾಯತ್ ಆರ್ಥಿಕ ಮತ್ತು ಲೆಕ್ಕಪತ್ರ ನಿಯಮಗಳ 25 ಮತ್ತು 29ನೇ ನಿಯಮಗಳಲ್ಲೂ ನಿರ್ದೇಶನಗಳಿವೆ. ಪ್ರಶ್ನಿತ ಬಿಲ್‌ಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಯಿಂದ ಸಲ್ಲಿಸಲ್ಪಟ್ಟಾಗ ಖಜಾನೆಯಲ್ಲಿ ಅವುಗಳನ್ನು ಈ ನಿಯಮಗಳನ್ವಯ ಪರಿಶೀಲನೆಗೆ ಒಳಪಡಿಸಬೇಕಿತ್ತು. ಹಾಜರುಪಡಿಸಲ್ಪಟ್ಟ 17 ಬಿಲ್‌ಗಳ ಪೈಕಿ 2 ಬಿಲ್‌ಗಳನ್ನು ಮಾತ್ರ ಶಿಕ್ಷಣ ಸಂಸ್ಥೆಯು ಸಿದ್ಧಪಡಿಸಿ ಅದರ ಮುಖ್ಯಸ್ಥರು ಸಹಿ ಮಾಡಿ, ತದನಂತರ ಕ್ಷೇತ್ರ ಶಿಕ್ಷಣಾಧಿಕಾರಿಗಳು ಡ್ರಾಯಿಂಗ್ ಆಫೀಸರ್ ಆಗಿ ಸಹಿ ಮಾಡಿದ್ದರು. ಉಳಿದ 15 ಬಿಲ್‌ಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳೇ ಸಿದ್ಧಪಡಿಸಿ ಸಲ್ಲಿಸಿದ್ದರು. ಸದರೀ ಬಿಲ್‌ಗಳನ್ನು ಶಿಕ್ಷಣ ಸಂಸ್ಥೆಯೇ ಸಿದ್ದಪಡಿಸಿ ಸಲ್ಲಿಸಬೇಕಿತ್ತು ಹಾಗೂ ಅಧಿಕೃತಗೊಳಿಸಲ್ಪಟ್ಟ ಕ್ಷೇತ್ರ ಶಿಕ್ಷಣ ಅಧಿಕಾರಿಯು ಸಹಿ ಮಾಡಬೇಕಿತ್ತು. ಜಿಲ್ಲಾ ಪಂಚಾಯತ್ ಅಡಿ ಬಿಡುಗಡೆಗೊಂಡ ಲೆಕ್ಕ ಶೀರ್ಷಿಕೆ 2202–80–800–0–04 ನ್ನು ಹಲವಾರು ಬಿಲ್‌ಗಳಲ್ಲಿ ನಮೂದಿಸಿರಲಿಲ್ಲ ಮತ್ತು ಹಲವಾರು ಬಿಲ್‌ಗಳು ತಿದ್ದಿ ಬರೆಯಲ್ಪಟ್ಟ ಲೆಕ್ಕ ಶೀರ್ಷಿಕೆಗಳನ್ನು ಒಳಗೊಂಡಿದ್ದವು.

ಈ ಕಾರಣದಿಂದಾಗಿ ಈ ಬಿಲ್‌ಗಳು ಪಾಸ್ ಮಾಡಲು ಅರ್ಹವಾಗಿರಲಿಲ್ಲ. ಇವು ತಿರಸ್ಕರಿಸಲು ಯೋಗ್ಯವಾಗಿದ್ದವು. ಇದನ್ನು ಸಮರ್ಪಕವಾಗಿ ತಪಾಸಣೆಗೆ ಒಳಪಡಿಸಬೇಕಾದ್ದು ವಿಷಯ ನಿರ್ವಾಹಕರಾದ 3ನೇ ಆರೋಪಿ, ಸ್ಕ್ರೂಟಿನಿ ಮಾಡಿದ ಮುಖ್ಯ ಲೆಕ್ಕಿಗರಾದ 2ನೇ ಆರೋಪಿ ಹಾಗೂ ಪಾಸ್ ಮಾಡಿದ 1ನೇ ಆರೋಪಿಗಳ ಕರ್ತವ್ಯ ಆಗಿತ್ತು. ಶಿಸ್ತು ಪ್ರಾಧಿಕಾರಿ ಪರ ಸಾಕ್ಷಿಯು ತನ್ನ ಸಾಕ್ಷ್ಯದೊಡನೆ ಹಾಜರುಪಡಿಸಿದ 5 ಬಿಲ್‌ಗಳಲ್ಲಿ ಸಂಬಂಧಪಡದ ಲೆಕ್ಕ ಶೀರ್ಷಿಕೆಯನ್ನು ನಮೂದಿಸಲಾಗಿದೆ. 9 ಬಿಲ್‌ಗಳಲ್ಲಿ ಲೆಕ್ಕ ಶೀರ್ಷಿಕೆಯನ್ನು ತಿದ್ದಿ ಬರೆಯಲಾಗಿದೆ. ಹಾಗೆಯೇ ಬಿಲ್‌ಗಳಲ್ಲಿ ಲಘು ಶೀರ್ಷಿಕೆ, ಉಪ ಶೀರ್ಷಿಕೆ ಹಾಗೂ ವಿಸ್ತೃತ ಲೆಕ್ಕ ಶೀರ್ಷಿಕೆಗಳನ್ನು ಗುರುತಿಸಲು ಸಾಧ್ಯವಾಗದಂತಹ ಸ್ವರೂಪದಲ್ಲಿವೆ. ಆರೋಪಿಗಳು ಈ ಎಲ್ಲಾ ನ್ಯೂನತೆಗಳನ್ನು ಗುರುತಿಸಿ ಬಿಲ್ ಹಿಂತಿರುಗಿಸುವ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಿದ್ದಲ್ಲಿ ರೂ. 43 ಲಕ್ಷದಷ್ಟು ಅಪಾರ ಮೊತ್ತದ ಹಣ ದುರುಪಯೋಗವಾಗಲು ಅವಕಾಶ

ಉಂಟಾಗುತ್ತಿರಲಿಲ್ಲ. ಆರೋಪಿಗಳೇನೋ ತಮ್ಮ ಲಿಖಿತ ಹೇಳಿಕೆ ಹಾಗೂ ಮಂಡಿಸಿದ ವಾದಗಳಲ್ಲಿ ತಾವು ಯಾವ ದುರ್ನಡತೆಯನ್ನೂ ಎಸಗಿಲ್ಲ. ಅಕ್ರಮಗಳನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾತ್ರ ಮಾಡಿದ್ದಾರೆ ಎಂದು ಪ್ರತಿಪಾದಿಸಿದ್ದಾರೆ. ಆದರೆ ಅವರುಗಳು ತಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸಿ ಬಿಲ್‌ಗಳನ್ನು ಸರಿಯಾದ ತಪಾಸಣೆಗೆ ಒಳಪಡಿಸಿ ಆಕ್ಷೇಪಣೆಯೊಡನೆ ಹಿಂತಿರುಗಿಸಬೇಕಾದ ಕರ್ತವ್ಯ ನಿರ್ವಹಿಸಿದ್ದಲ್ಲಿ ಈ ರೀತಿ ಅಕ್ರಮ ಜರುಗಲು ಅವಕಾಶ ಆಗುತ್ತಿರಲಿಲ್ಲ. ಆದ್ದರಿಂದ ಅವರುಗಳ ವಿರುದ್ಧ ಹೊರಿಸಲಾದ ಆರೋಪ ಸಾಬೀತಾಗಿದೆ.

ಮೇಲಿನ ವಿಚಾರಣಾ ವರದಿಯನ್ನು ಪರಾಮರ್ಶಿಸಿದ ಸನ್ಮಾನ್ಯ ಲೋಕಾಯುಕ್ತರು ತಮ್ಮ ಶಿಫಾರಸ್ಸಿನೊಡನೆ ಮೇಲೆ (3)ರಲ್ಲಿ ಓದಲಾದ ದಿ: 5.4.2011ರ ವರದಿ ಸಲ್ಲಿಸಿದರು. ವಿಚಾರಣಾ ವರದಿ ಹಾಗೂ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನ ಪ್ರತಿಗಳನ್ನು ಲಗತ್ತಿಸಿ ಆರೋಪಿಗಳಿಗೆ ಮೇಲೆ (4)ರಲ್ಲಿ ಓದಲಾದ ದಿ: 26.8.2011ರ ಎರಡನೇ ಕಾರಣ ಕೇಳುವ ನೋಟೀಸ್ ನೀಡಿ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸು ಕುರಿತು ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಶ್ರೀ ಜಯದೃತ ಶೃಂಗೇರಿ (10.10.2011), ಶ್ರೀ ಅಂಬರಾಯ ಪವಾರ್ (13.10.2011) ಹಾಗೂ ಶ್ರೀ ದೇವೇಂದ್ರಪ್ಪ (12.10.2011) ಅವರುಗಳು ಮೇಲೆ (5-7)ರಲ್ಲಿ ಉತ್ತರ ಸಲ್ಲಿಸಿ, ಖಜಾನೆ ಮೂಲಕ ಜಿಲ್ಲಾ ಪಂಚಾಯತ್‌ಗಳ ಬಜೆಟ್ ನಿಯಂತ್ರಣ ವ್ಯವಸ್ಥೆಯು ದಿ: 15.9.2006ರಿಂದ ಜಾರಿಗೆ ಬಂದಿದೆ. ಆದರೆ ಈ ಪ್ರಕರಣ ನಡೆದಿರುವುದು 2002-03ನೇ ಸಾಲಿನಲ್ಲಿ ಆದ್ದರಿಂದ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿಗಳಿಂದ ನಿರ್ಣಯ ಹಾಗೂ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸು ಇವುಗಳಿಗೆ ಯಾವುದನ್ನು ಆಧಾರವಾಗಿ ಪರಿಗಣಿಸಲಾಗಿದೆಯೋ ಆ ವ್ಯವಸ್ಥೆಯೇ ಅಂದು ಅಸ್ತಿತ್ವದಲ್ಲಿರಲಿಲ್ಲ. ಇದನ್ನು ವಿಚಾರಣಾಧಿಕಾರಿಗಳ ಗಮನಕ್ಕೆ ತಂದರೂ ಅದನ್ನು ಪರಿಗಣಿಸಿಲ್ಲ. ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರು ದಿ: 27.11.2001ರ ಪತ್ರದಲ್ಲಿ ತಿಳಿಸಿರುವಂತೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣ ಅಧಿಕಾರಿ, ಗುಲ್ಬರ್ಗಾ ಅವರು ಪ್ರಶ್ನಿತ ಶಿಕ್ಷಣ ಸಂಸ್ಥೆಗಳ ಪ್ರಕರಣದಲ್ಲಿ ವೇತನ ಬಟವಾಡೆ ಅಧಿಕಾರಿ ಆಗಿರುತ್ತಾರೆ. ಅದರಂತೆ ಅವರು ಬಿಲ್ಲುಗಳ ಮೇಲೆ ಸಹಿ ಮಾಡಿರುತ್ತಾರೆ. ಸಂಹಿತೆಯ ಅನುಚ್ಛೇದ 62ರಂತೆ ಹಣ ಸೆಳೆದ ಅಧಿಕಾರಿ ಹಾಗೂ ಮೇಲೆ ಸಹಿ ಮಾಡುವ ಅಧಿಕಾರಿಗಳೇ ಪ್ರಾಥಮಿಕವಾಗಿ ಜವಾಬ್ದಾರರಾಗುತ್ತಾರೆ. ಖಜಾನೆ ಅಧಿಕಾರಿಗಳು ಗಣಿತ ಲೆಕ್ಕಾಚಾರದ ಕರಾರುವಾಕ್ಕಿಗೆ ಜವಾಬ್ದಾರರಾಗುತ್ತಾರೆ. ವಿಚಾರಣೆಯಲ್ಲಿ ಪರಿಶೀಲಿಸಲ್ಪಟ್ಟ ಅಂಶಗಳು ಸಾಮಾನ್ಯ ಬಿಲ್ಲುಗಳಿಗೆ ಸಂಬಂಧಿಸಿವೆ. ಆದರೆ ಈ ಪ್ರಕರಣವು ಸಹಾಯಾನುದಾನ ಸಂಹಿತೆಗೆ ಒಳಪಟ್ಟಿವೆ. ಅವುಗಳನ್ನು ಇದಕ್ಕೆ ಅನ್ವಯಿಸಲು ಬರುವುದಿಲ್ಲ. ಲೆಕ್ಕ ಶೀರ್ಷಿಕೆಯಲ್ಲಿ ವ್ಯತ್ಯಾಸ ಬಂದಲ್ಲಿ ಅವುಗಳನ್ನು ಲೆಕ್ಕ ಸಮನ್ವಯೀಕರಣ ಸಮಯದಲ್ಲಿ ಲೆಕ್ಕ ಬದಲಾವಣೆ ಪತ್ರದ ಮೂಲಕ ಸರಿಪಡಿಸಿಕೊಳ್ಳಲು ಅವಕಾಶವಿದೆ. ಆದ್ದರಿಂದ ಪ್ರಸ್ತಾಪಿತ ದಂಡನೆಯನ್ನು ಕೈಬಿಡಲು ಕೋರಿದ್ದಾರೆ.

ಮೇಲಿನ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಿದೆ. 5 ಜಿಲ್ಲೆಗಳ ಜಿಲ್ಲಾ ಪಂಚಾಯತ್ ಆಯವ್ಯಯ ನಿಯಂತ್ರಣವನ್ನು ಖಜಾನೆ ಇಲಾಖೆ ಮೂಲಕ ಕೈಗೊಳ್ಳುವ ಪ್ರಾಯೋಗಿಕ ಯೋಜನೆಯನ್ನು 2006ರಲ್ಲಿ ಜಾರಿಗೆ ತಂದಿರುವುದು ನಿಜ, ಆದರೆ, ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಅನುದಾನ ಸಂಹಿತೆಗೆ ಒಳಪಡಿಸಿ ಅಲ್ಲಿನ ಸಿಬ್ಬಂದಿಗೆ ಖಜಾನೆ ಮೂಲಕ ವೇತನ ಭತ್ಯೆಗಳನ್ನು ಪಾವತಿಸುವ ವ್ಯವಸ್ಥೆಯು ಹಿಂದಿನಿಂದಲೂ ನಡೆದುಕೊಂಡು ಬರುತ್ತಿದೆ. ಜಿಲ್ಲಾ ಪಂಚಾಯತ್ ಆಯವ್ಯಯ ನಿಯಂತ್ರಣವನ್ನು ಖಜಾನೆ ಇಲಾಖೆ ಮೂಲಕ ಕೈಗೊಳ್ಳುವ ಪ್ರಾಯೋಗಿಕ ಯೋಜನೆಗೆ ಗುರುತಿಸಿದ 5 ಜಿಲ್ಲೆಗಳಲ್ಲಿ ಆರೋಪಿಗಳು ಕಾರ್ಯನಿರ್ವಹಿಸುತ್ತಿದ್ದ ಗುಲ್ಬರ್ಗಾ ಜಿಲ್ಲಾ ಖಜಾನೆ ಸೇರಿರಲಿಲ್ಲ. ಅದು ಹಿಂದಿನಂತೆಯೇ ಕಾರ್ಯ ನಿರ್ವಹಿಸುತ್ತಿತ್ತು. ಆದ್ದರಿಂದ ಅವರ ನಿಲುವು ಒಪ್ಪಲು ಅವಕಾಶವಿಲ್ಲ. ಹಾಗೆಯೇ ಖಜಾನೆಗೆ ಸಲ್ಲಿಸಲ್ಪಟ್ಟ ಹಣಕಾಸು ಬಿಲ್‌ಗಳನ್ನು ಕಠಿಣವಾದ ತಪಾಸಣೆಗೆ ಒಳಪಡಿಸುವುದು ಆರೋಪಿಗಳ ಜವಾಬ್ದಾರಿ ಆಗಿತ್ತು. ಇದನ್ನು ಸಮರ್ಪಕವಾಗಿ ಮಾಡಿದ್ದಲ್ಲಿ ಮೇಲು ಸಹಿ ಹಾಕಲು ಅಧಿಕೃತಗೊಂಡ ಅಧಿಕಾರಿಯೇ ಬಿಲ್ ಸಿದ್ದಪಡಿಸಿದ ತಪ್ಪು ಲೆಕ್ಕ ಶೀರ್ಷಿಕೆ ನಮೂದಿಸಿಯೂ, ತಿದ್ದಿದ ಬಿಲ್‌ಗಳನ್ನು ಸಲ್ಲಿಸಿಯೂ, ಹಣ ಸೆಳೆವ ಪ್ರಕರಣಗಳು ಉದ್ಭವಿಸುತ್ತಿರಲಿಲ್ಲ. ಆದ್ದರಿಂದ ಆರೋಪಿಗಳ ಉತ್ತರವನ್ನು ಒಪ್ಪಿಕೊಳ್ಳದೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಹಾಗೂ ದಂಡನೆ ವಿಧಿಸಬೇಕೆಂಬ ಸನ್ಮಾನ್ಯ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡು ಸರ್ಕಾರವು ದಂಡನೆ ವಿಧಿಸಲು ನಿರ್ಣಯಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 142 ಆಖಇ 2011, ಬೆಂಗಳೂರು, ದಿನಾಂಕ: 02.02.2012**

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(iv-ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಯದೃತ ಶೃಂಗೇರಿ, ಸಹಾಯಕ ಖಜಾನಾಧಿಕಾರಿ, ಖಜಾನೆ ಇಲಾಖೆ ಅವರ ವೇತನವನ್ನು ವೇತನ ಶ್ರೇಣಿ ರೂ. 11400-300-12300-350-14400-400-16800-450-19500-525-21600ರಲ್ಲಿ ಪ್ರಸ್ತುತ ಪಡೆಯುತ್ತಿರುವ ರೂ. 15,600/-ರಿಂದ 2 ಹಂತ ಕೆಳಕ್ಕೆ ಅಂದರೆ ರೂ. 14,800/-ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ದಿ: 30.6.2012 ರವರೆಗೆ ಜಾರಿಯಲ್ಲಿರುವಂತೆ ಇಳಿಸುತ್ತದೆ. ಈ ದಂಡನೆಯು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದೂಡುವ ಪರಿಣಾಮ ಬೀರುತ್ತದೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಂಬಾರಾಯ ಪವಾರ್, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆ ವಿಧಿಸುತ್ತದೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8(iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ದೇವೇಂದ್ರಪ್ಪ, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರ ಮುಂದಿನ ಎರಡು ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ ತಡೆಹಿಡಿಯುವ ದಂಡನೆ ವಿಧಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಲ್. ರಮೇಶ**

ಪಿ.ಆರ್. 598

ಸರ್ಕಾರದ ಅಧೀನ ಕಾರ್ಯದರ್ಶಿ

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## FINANCE SECRETARIAT

**Sub :** Computerization of Treasuries in Karnataka-administrative approval-regarding.

**Read :** 1) Director of Treasuries D.O. letter No. DOT/NMC/70/08-09 dt. 30.10.2008.

2) Proceedings of the Empowered Committee meeting dt. 15.9.2009.
3) Govt. Order No. FD 157 ATE 2009 (P) dt. 16.10.2009.
4) Govt. Order No. FD 158 ATE 2009 dt. 21.10.2009.
5) Govt. Order No. FD 172 ATE 2009 dt. 24.10.2009.
6) Govt. Order No. FD 172 ATE 2009 dt. 21.11.2009.
7) Proceedings of the Steering Committee meeting dt. 24.10.2009.
8) Expression of Interest dt. 28.10.09 published in e-procurement platform.
9) Proceedings of the Steering Committee meeting dt. 8.2.2010.
10) Proceedings of the Steering Committee meeting dt. 24.9.2010.
11) Proceedings of the Empowered Committee meeting dt. 27.10.2010.
12) Request for proposal dt. 18.11.2010 published in e-procurement platform.
13) Proceedings dt. 5.1.2011 of the TAP meeting dt. 21.12.2010 reg. approval for procurement of hardware and software.
14) Proceedings of the Steering Committee meeting dt. 8.7.2011.
15) `Proceedings of the Steering Committee meeting dt. 24.8.2011.
16) Govt., order No: FD 138 ATE 2011 dated 24.8.2011.
17) Issue of Work order to TCS by Director of Treasuries dt. 3.9.2011.
18) Acceptance letter to the work order of Director of Treasuries dt. 21.9.2011.
19) Signing of MSA between Director of Treasuries and Vice President, M/s. TCS dt. 18.10.2011.

**Preamble:**

In the meeting held on 15.9.2009 the Empowered Committee on e-Governance accorded approval in principle for the Khajane-II project-proposal of the Treasury Department and formation of Steering and Technical committees for the related procurement and implementation processes. Further it approved the e-Governance plan for the year 2010-11.

Consequently in G.O. read at (3) & (4) above Technical Committee and Steering Committee for Khajane-II was formed. Further in Government order read at (5) above, the Steering Committee of Khajane II was appointed as Tender Accepting Authority and the Director of Treasuries was appointed as Tender Inviting Authority for the procurement process for Khajane II under the provisions of KTPP Act 1999 and Rules 2000.

The Steering Committee in its meeting held on 24.10.2009 approved the RFP-EoI for the Khajane II and permitted floating for Expression of Interest. The Committee also appointed the Technical committee for Khajane II as the Tender Scrutiny Committee for the project.

Accordingly the Director of Treasuries in the letter read at (8) above floated RF-EoI on 28.10.2009 for shortlisting vendors who were interested in participating for the tender (RFP), for implementation and maintenance of Khajane-II project. In response to this, 13 firms expressed their interest. The interest of the bidders was evaluated by the Tender Scrutiny Committee. In the meeting held on 8.2.2010, the Steering and Tender Accepting Authority for Khajane II accepted the Tender Evaluation Report of Tender Scrutiny Committee; and declared that the EoI of the following bidders, conformed to the criteria of the RF-EoI and therefore considered them to be eligible to be given the RFP for Khajane II.

1) M/s. Hewlett Packard India Sales Pvt. Ltd.
2) M/s. NIIT Technologies Ltd.
3) M/s. IBM India Pvt. Ltd.
4) M/s. Siemens Information Systems Ltd.
5) M/s. Bharat Eletronics Ltd.
6) M/s. Capgemini Consulting India Pvt. Ltd.
7) M/s. CMC Ltd.
8) M/s. Tata Consultancy Services Ltd.
9) M/s. Infosys Tehnologies Ltd.
10) M/s. Wipro Infotech

In the meeting held on 24.9.2010, the Stering Committee approved the RFP for Khajane II and permitted its sharing with the shortlisted bidders from the EoI stage. In the meeting held on 27.10.2010, the Empowered Committee on e-Governance approved the project and its financial commitment.

In response to the RFP document read at 12 above, upon closing of the bid submission on 11th March 2011, 7 bids were received from the following bidders-

1) M/s. Hewlett Packard India Sales Pvt. Ltd.

2) M/s. NIIT Technologies Ltd.
3) M/s. Capgemini Consulting India Pvt. Ltd.
4) M/s. CMC Ltd.
5) M/s. Tata Consultancy Services Ltd.
6) M/s. Infosys Tehnologies Ltd.
7) M/s. Wipro Infotech

The proposals were evaluated by the Tender Scrutiny Committee and its report was submitted to the Steering Committee. The Steering Committee in its meeting held on 8.7.2011 accepted the Evaluation Report of the Tender Scrutiny Committee and permitted the opening of the commercial proposals of the following six companies and fixed the date for opening financial proposal as 14.7.2011.

1) M/s. NIIT Technologies Ltd.
2) M/s. Capgemini Consulting India Pvt. Ltd.
3) M/s. CMC Ltd.
4) M/s. Tata Consultancy Services Ltd.
5) M/s. Infosys Tehnologies Ltd.
6) M/s. Wipro Infotech

Accordingly commercial proposals were opened on 14th July 2011. Costs quoted by bidders are as below. The commercial proposal submitted by M/s. Tata Consultancy Services Ltd. was found to be L1 with a total project cost of Rs. 796,198,295/-.

| | **Organization** | **NPV** | **Total Cost** |
|---|---|---|---|
| L1 | TCS | 718,782909 | 796,198,295 |
| L2 | CMC | 779,803,272 | 886.221.820 |
| L3 | NIIT | 934,184,209 | 1,076,343,389 |
| L4 | CAPGEMINI | 1,425,867,384 | 1,617,726,739 |
| L5 | WIPRO | 1,755,954,355 | 1,969,215,221 |
| L6 | INFOSYS | 2,215,413,763 | 2,500,256,408 |

As the amount quoted by M/s. Tata Consultancy Services Ltd., Bangalore was the lowest, Steering Committee in its meeting held on 24.8.2011 accepted commercial quote of TCS and declared the commercial proposal of TCS as L1 and permitted the issuance of work order to TCS and sign a formal agreement with TCS using the MSA as the base and also permitted KII project implementation phase. In the meanwhile the State Government also accorded approval of the Khajane II project vide Government order read at 16 above.

The Director of Treasuries issued a work order to M/s. Tata Consultancy Services Ltd. on 3.9.2011 for which M/s. Tata Consultancy Services Ltd. gave their acceptance letter on 21.9.2011 vide read at 17 above.

The Master Service Agreement was signed between Director of Treasuries and M/s. Tata Consultancy Services on 18th October 2011 under the aegis of the Hon'ble Chief Minister of Karnataka. Hence the following order.

**Government Order No.FD 132 ATE 2011, Bangalore Dated: 06-02-2012**

Administrative approval of Government is accorded for entrusting the responsibility of carrying out the following sets of work relating to the implementation and maintenance of Khajane II project, an integrated financial management system of the Government of Karnataka to M/s. Tata Consultancy Services Limited as per the timelines specified in the Request for proposal (RFP) and the Master Service Agreement signed on 18th October 2011.

The scope of work for TCS shall include the following -

1. Khajane II Application Software Development;
2. Creation of Khajane II Data Centre for hosting the Integrated Financial Management application software of the Government;
3. Deployment of required hardware and system software for running the application in all 218 treasuries in the State;
4. Migration of current Khajane services along with data to the new system;
5. Supporting User Acceptance Testing of the Application Software as well as the hardware;
6. Ensuring human capacity build-up through imparting of exhaustive training to the employees of the Government on usage of the new system;
7. Providing facility management support at all locations of the Treasuries;
8. Manage a Help Desk for supporting users of the system.
9. Ensure adhrence to minimum SLA requirements.
10. Provide support and maintenance for all software and hardware deployed during the contract.
11. Deploy appropriate and adequate resources as mandated in the contract.
12. Provide adequate exit management support in order to handover its own responsibilities with respect to the project to the successor System Integrator.

The Master Service Agreement signed between the Director of Treasuries and Tata Consultancy Services Ltd. represented by Sri Tanmoy Chakrabarty, Vice President & Head Global Govt. (ISU) dated 18th October 2011 will govern the implementation and maintenance of the project work.

By Order and in the name of the Governor of Karnataka,

**B.L. RAMESHA**

P.R. 599

Under Secretary to Government,

Finance Department (Admn., & Adv.,)

## ಆರ್ಥಿಕ ಸಚಿವಾಲಯ

**ವಿಷಯ :** ಅರ್ಜಿ ಸಂಖ್ಯೆ:3242/99ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ದಿ: 26.6.2009ರಂದು ನೀಡಿದ ಆದೇಶದನ್ವಯ ಶ್ರೀ ಬಿ.ಎ. ಪಾಟೀಲ್, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರಿಗೆ ಅಡ್‌ಹಾಕ್ ಪಿಂಚಣಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ:ಆಇ 207 ರಾಲೆಪ 2009 ದಿನಾಂಕ: 2.8.2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿ: 2.8.2011ರ ಅಧಿಸೂಚನೆಯಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ:3242/99ರಲ್ಲಿ ದಿ:26.6.2009ರಂದು ನೀಡಿದ ಆದೇಶದಂತೆ ಶ್ರೀ ಬಿ.ಎ. ಪಾಟೀಲ್, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ಸೇವೆಯಿಂದ ಡಿಸ್‌ಚಾರ್ಜ್ ಮಾಡಲಾದ ಅಧಿಸೂಚನೆ ಸಂಖ್ಯೆ:ಆಇ 380 ರಾಲೆಪ 90(ಪಿ) ದಿ: 29.5.1999ನ್ನು ಹಿಂದಕ್ಕೆ ಪಡೆಯಲಾಯಿತು ಹಾಗೂ ಅವರು ನಿವೃತ್ತಿ ವಯೋಮಿತಿಯನ್ನು ತಲುಪಿದ ದಿ: 31.5.1999ರವರೆಗೂ ಸೇವೆಯಲ್ಲಿ ಮುಂದುವರೆದಿದ್ದಾರೆಂದು ಪರಿಗಣಿಸಲಾಯಿತು. ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣೆ) ನಿಯಮಗಳು 1977ರನ್ವಯ ಸರ್ಕಾರಿ ನೌಕರರು ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದ ಹೊರತು ಅವರು ಸೇವೆಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲು ಅಥವಾ ಪರಿಭಾವಿಸಲು ಅವಕಾಶ ಇರುವುದಿಲ್ಲ. ಅವರು ನಿವೃತ್ತಿ ವೇತನ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ. ಶ್ರೀ ಬಿ.ಎ. ಪಾಟೀಲ್ ಅವರು 15 ವರ್ಷಗಳ ಪ್ರೊಬೇಷನರಿ ಸಹಾಯಕ ನಿಯಂತ್ರಕರಾಗಿ ಸೇವೆಯನ್ನು ಸಲ್ಲಿಸಿ ದಿ: 31.5.1999ರಂದು ವಯೋ ನಿವೃತ್ತಿ ಹೊಂದಿರುವ ಅಂಶವನ್ನು ಮತ್ತು ಪ್ರಕರಣದ ಕ್ಲಿಷ್ಟ ಸಂದರ್ಭವನ್ನು ಪರಿಗಣಿಸಿ, ಕೆ.ಸಿ.ಎಸ್.ಆರ್. ನಿಯಮಾವಳಿ ನಿಯಮ 210ರಂತೆ ಅಡ್‌ಹಾಕ್ ಪಿಂಚಣಿಯನ್ನು ನೀಡುವುದು ಅಗತ್ಯವೆಂದು ಪರಿಗಣಿಸಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 207 ರಾಲೆಪ 2009, ಬೆಂಗಳೂರು, ದಿನಾಂಕ: 02–02–2012**

ಶ್ರೀ ಬಿ.ಎ.ಪಾಟೀಲ್, ನಿವೃತ್ತ ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರಿಗೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 210ರನ್ವಯ ದಿನಾಂಕ 1.6.1999ರಿಂದ ಜಾರಿಗೆ ಬರುವಂತೆ ಅಡ್‌ಹಾಕ್ ಪಿಂಚಣಿಯನ್ನು ಮಂಜೂರು ಮಾಡಲು ಆದೇಶಿಸಿದೆ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 563 ಸೇನಿಎ 2011 ದಿ: 18.1.2012 ರನ್ವಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಯೊಡನೆ ಹಾಗೂ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ 97 ಸೇ–1/12 ದಿ: 24.1.2012ರನ್ವಯ ಆರ್ಥಿಕ ಇಲಾಖೆ (ಸೇವೆಗಳು) ಯೊಡನೆ ಸಮಾಲೋಚಿಸಿದ ನಂತರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಲ್. ರಮೇಶ**

ಪಿ.ಆರ್. 600

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ವಿ. ರಾಘವೇಂದ್ರ, ದ್ವಿತೀಯ ದರ್ಜೆ ಸಹಾಯಕ ಹಾಗೂ ಶ್ರೀ ಮೊಹಮ್ಮದ್ ಅಸಾದುಲ್ಲಾ ಖಾನ್, ಮುಖ್ಯ ಲೆಕ್ಕಿಗರು, ಜಿಲ್ಲಾ ಖಜಾನೆ, ಮೈಸೂರು ಇವರ ಮೇಲಿನ ಲೋಕಾಯುಕ್ತ ಪೋಲೀಸ್ ಟ್ರ್ಯಾಪ್ ಪ್ರಕರಣ–ಇಲಾಖಾ ವಿಚಾರಣೆಯನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಅಪರ ನಿಬಂಧಕರು, ವಿಚಾರಣೆಗಳು–11, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ: ಕಂಪ್ಲೇಂಟ್/ಉಪಲೋಕ್/ಎಂವೈಎಸ್/449/2010/ಎಆರ್‌ಇ–11, ದಿ: 21.01.2012 ಮತ್ತು ಮಾನ್ಯ ಉಪ ಲೋಕಾಯುಕ್ತರ ವರದಿ ದಿ: 19.01.2012.

**ಪ್ರಸ್ತಾವನೆ :**

ಅಪರ ನಿಬಂಧಕರು (ವಿಚಾರಣೆಗಳು–11), ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ದಿ: 21.01.2012ರ ಪತ್ರದೊಂದಿಗೆ ಕಳುಹಿಸಿರುವ ದಿ: 19.01.2012ರ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ನಿಯಮ 12(3)ರ ಅಡಿಯಲ್ಲಿ ಉಪ ಲೋಕಾಯುಕ್ತರು ನೀಡಿರುವ ವರದಿಯಲ್ಲಿ ಶ್ರೀ ವಿ. ರಾಘವೇಂದ್ರ, ದ್ವಿತೀಯ ದರ್ಜೆ ಸಹಾಯಕ ಹಾಗೂ ಶ್ರೀ ಮೊಹಮ್ಮದ್ ಅಸಾದುಲ್ಲಾ ಖಾನ್, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಇವರು ಮೈಸೂರು ಜಿಲ್ಲಾ ಖಜಾನೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಶ್ರೀ ಬಿ.ಆರ್. ನಂದಕಿಶೋರ್ ಇವರಿಗೆ ಸಂಬಂಧಿಸಿದ ಚೆಕ್ ನೀಡಲು ದಿ: 16.10.2008ರಂದು ಅಕ್ರಮ ಸಂಭಾವನೆ ಪಡೆಯುತ್ತಿದ್ದಾಗಲೇ ಕರ್ನಾಟಕ ಲೋಕಾಯುಕ್ತ ಪೋಲೀಸರಿಗೆ ಸಿಕ್ಕಿಬಿದ್ದಿದ್ದಾರೆ. ಈ ಬಗ್ಗೆ ಮಾನ್ಯ ಉಪ ಲೋಕಾಯುಕ್ತರು ನಡೆಸಿದ ಪ್ರಾಥಮಿಕ ತನಿಖೆಯಲ್ಲಿ ಸದರಿ ಆರೋಪವು–ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿ ಸರ್ಕಾರಿ ನೌಕರರು ಸರ್ಕಾರಿ ನೌಕರರಿಗೆ ತಕ್ಕದಲ್ಲದ ನಡತೆ, ಪ್ರಾಮಾಣಿಕತೆ, ಕರ್ತವ್ಯ ನಿಷ್ಠೆ ಕಾಪಾಡುವಲ್ಲಿ ವಿಫಲರಾಗಿರುವುದರಿಂದ ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)ರನ್ವಯ ಇವರು ಶಿಸ್ತು ಕ್ರಮಕ್ಕೆ ಅರ್ಹರಾಗಿರುವುದರಿಂದ ಅವರ ವಿರುದ್ಧ ಪೂರ್ಣ ಪ್ರಮಾಣದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ತಮಗೆ ವಹಿಸುವಂತೆ ತಿಳಿಸಿರುತ್ತಾರೆ.

ಕರ್ನಾಟಕ ಉಪ ಲೋಕಾಯುಕ್ತರವರು ಕಳುಹಿಸಿರುವ ವರದಿ ಹಾಗೂ ತತ್ಸಂಬಂಧ ಲಗತ್ತಿಸಿರುವ ದಾಖಲೆಗಳನ್ನು ಸರ್ಕಾರವು ಪರಿಶೀಲಿಸಿದೆ. ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವಂತೆ ಕಂಡು ಬರುತ್ತದೆ. ಅಂತೆಯೇ ವಿಷಯವನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 16 ಆಖಇ 2012, ಬೆಂಗಳೂರು, ದಿನಾಂಕ: 08–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ವಿ. ರಾಘವೇಂದ್ರ, ದ್ವಿತೀಯ ದರ್ಜೆ ಸಹಾಯಕ ಹಾಗೂ ಶ್ರೀ ಮೊಹಮ್ಮದ್ ಅಸಾದುಲ್ಲಾ ಖಾನ್, ಮುಖ್ಯ ಲೆಕ್ಕಿಗರು, ಖಜಾನೆ ಇಲಾಖೆ ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಜಂಟಿ ಇಲಾಖಾ ವಿಚಾರಣೆಯನ್ನು ಮಾನ್ಯ ಉಪ ಲೋಕಾಯುಕ್ತರ ಮೂಲಕ ನಡೆಸಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಲ್. ರಮೇಶ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

ಪಿ.ಆರ್. 601

## ಆರ್ಥಿಕ ಸಚಿವಾಲಯ

**ವಿಷಯ :** ಸರ್ಕಾರದ ಪರವಾಗಿ ಹಾಜರಾಗುವ ಖಾಸಗಿ ವಕೀಲರಿಗೆ ಸಂಭಾವನೆಯನ್ನು ನೀಡುವ ಬಗ್ಗೆ ಆರ್ಥಿಕ ಅಧಿಕಾರಗಳ ಪ್ರತ್ಯಾಯೋಜನೆ–ತತ್ಸಂಬಂಧ ಸರ್ಕಾರದ ಆದೇಶ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10–7–1996.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 45 ರಲ್ಲಿ ಉದ್ದೇಶಿಸಿದಂತೆ ತನ್ನ ಅನುಮತಿಯನ್ನು ನೀಡಲಾಗಿದೆ ಎಂದು ಭಾವಿಸಬಹುದಾದ ಪ್ರಕರಣಗಳನ್ನು ಗೊತ್ತುಪಡಿಸಿದೆ. ಈ ಆದೇಶದಂತೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರಗಳನ್ನು ಇಲಾಖಾ ಕಾರ್ಯದರ್ಶಿಗಳು ಚಲಾಯಿಸಬಹುದಾಗಿದೆ.

ವಿಚಾರಣಾ ಆಯೋಗಗಳು, ನ್ಯಾಯ ಮಂಡಳಿಗಳು ಮತ್ತು ನ್ಯಾಯಾಲಯಗಳ ಮುಂದೆ ಸರ್ಕಾರ/ಇಲಾಖಾ ಮುಖ್ಯಸ್ಥರ ಪರವಾಗಿ ವಾದ ಮಂಡಿಸಲು ಬಳಸಿಕೊಂಡ ಖಾಸಗಿ ವಕೀಲರುಗಳಿಗೆ ಸಂಭಾವನೆ ನೀಡುವ ಬಗ್ಗೆ ಮಂಜೂರಾತಿ ಕೋರಿ ಪ್ರಸ್ತಾವನೆಗಳು ಆರ್ಥಿಕ ಇಲಾಖೆಗೆ ಹೆಚ್ಚಾಗಿ ಬರುತ್ತಿರುವುದರಿಂದ ಹಾಗೂ ವಕೀಲರುಗಳಿಗೆ ಸಂಭಾವನೆ ನೀಡುವಲ್ಲಿ ವಿಳಂಬವಾಗುತ್ತಿರುವುದನ್ನು ಸಹ ಪರಿಗಣಿಸಿ ಇಂತಹ ಪ್ರಕರಣಗಳಿಗೆ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 3 ಟಿಎಫ್‌ಪಿ 2011, ಬೆಂಗಳೂರು, ದಿನಾಂಕ: 27–01–2012**

ಎಲ್ಲಾ ತರಹದ ವಿಚಾರಣಾ ಆಯೋಗಗಳು, ನ್ಯಾಯ ಮಂಡಳಿಗಳು ಮತ್ತು ನ್ಯಾಯಾಲಯಗಳ ಮುಂದೆ ಸರ್ಕಾರ/ಇಲಾಖಾ ಮುಖ್ಯಸ್ಥರ ಪರವಾಗಿ ವಾದ ಮಂಡಿಸಲು ಖಾಸಗಿ ವಕೀಲರ ಸೇವೆಯನ್ನು ಬಳಸಿಕೊಂಡಲ್ಲಿ ಅಂತಹ ಪ್ರಕರಣಗಳಲ್ಲಿ ಕಾನೂನು ಇಲಾಖೆಯ ಪೂರ್ವಾನುಮತಿಯನ್ನು ಪಡೆಯುವ ಷರತ್ತಿಗೆ ಒಳಪಟ್ಟು ಸಂಭಾವನೆಯನ್ನು ಮಂಜೂರು ಮಾಡುವ ಅಧಿಕಾರವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದೆ. ಆದರೆ ಕ್ಲೇಮುಗಳನ್ನು ನಿಗದಿ ಮಾಡುವಾಗ ಸರ್ಕಾರಿ ವಕೀಲರಿಗೆ ಅನ್ವಯವಾಗುವ ಶುಲ್ಕವನ್ನು ಉಲ್ಲೇಖವಾಗಿ ತೆಗೆದುಕೊಳ್ಳಬೇಕು. ಹಾಗೆಯೇ ಕ್ಲೇಮುಗಳ ಮೊತ್ತವು ಹೆಚ್ಚೆಂದು ಕಂಡುಬರುವ ಪ್ರಕರಣಗಳಲ್ಲಿ ಸಂಬಂಧಿಸಿದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗೆ ಅಂತಹ ಹೆಚ್ಚುವರಿ ಮೊತ್ತದ ಕ್ಲೇಮುಗಳ ಸೂಕ್ತತೆಯ ಬಗ್ಗೆ ತೃಪ್ತಿಕರವಾಗಿದೆಯೆಂದು ಮನವರಿಕೆಯಾಗಿರಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶಾಮರಾವ್**

ಸರ್ಕಾರದ ಉಪ ಕಾರ್ಯದರ್ಶಿ,

(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ

ಪಿ.ಆರ್. 602

## ತೋಟಗಾರಿಕೆ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ತೋಇ 31 ರೇಉವಿ 2011, ಬೆಂಗಳೂರು ದಿನಾಂಕ: 02–02–2012**

ದಿನಾಂಕ: 6–1–2012ರ ಸರ್ಕಾರಿ ಆದೇಶ ಸಂಖ್ಯೆ: ತೋಇ 31 ರೇಉನಿ 2011 ಆದೇಶ ಭಾಗದ ಕಂಡಿಕೆ–3ರಲ್ಲಿ "ಹಣ ಪಡೆಯುವ ಅಧಿಕಾರಿ ಸಾದಿಲ್ವಾರು ನಿಧಿಯಿಂದ ಹಣವನ್ನು ಪಡೆಯಲು ಬಿಲ್ಲನ್ನು ಖಜಾನೆಗೆ ಕಳುಹಿಸಿದಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯು ಹಣ ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳುವುದು" ಪದಗಳ ನಂತರ "ಖಜಾನೆಯಲ್ಲಿ ಪೆಯೀಸ್ ರಶೀದಿ (payees receipt) ನ ಮುಖಾಂತರ ರೇಷ್ಮೆ ಕೃಷಿ ಮತ್ತು ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ನಿರ್ದೇಶಕರು ಮೊತ್ತವನ್ನು ಸೆಳೆಯತಕ್ಕದ್ದು." ಎಂಬ ಪದಗಳನ್ನು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಚಂದ್ರಶೇಖರ್**

ಪೀಠಾಧಿಕಾರಿ

ತೋಟಗಾರಿಕೆ ಇಲಾಖೆ (ರೇಷ್ಮೆ)

ಪಿ.ಆರ್. 603

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮೃತ್ಯುಂಜಯ, ನಿವೃತ್ತ ಕೆ.ಎ.ಎಸ್, ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಮಹಾಲೇಖಪಾಲರು ಇವರ ಪತ್ರ ಸಂಖ್ಯೆ: GE 1 R5/Vol–537/2010–11/231, ದಿನಾಂಕ: 04.11.2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಸಂ(1), ದಿನಾಂಕ: 04–11–2010ರ ಪತ್ರದಲ್ಲಿ ಮಹಾಲೇಖಪಾಲಕರು, ಇವರು ಶ್ರೀ ಮೃತ್ಯುಂಜಯ, (ನಿವೃತ್ತ) ಕೆ.ಎ.ಎಸ್, ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರ ವೇತನ ಶ್ರೇಣಿ ರೂ.11,400–21,600 ಇದ್ದು ದಿನಾಂಕ: 01–05–2006 ಕ್ಕೆ ಸದರಿಯವರು ಗರಿಷ್ಠ ವೇತನ ಮಿತಿ ತಲುಪಿರುತ್ತಾರೆಂದು, ಸದರಿಯವರು ದಿನಾಂಕ: 01–05–2007 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಗೆ ಅರ್ಹರಿರುವುದಾಗಿ ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಆರ್‌ಡಿ 56 ಎಎಸ್‌ಡಿ 2011, ಬೆಂಗಳೂರು, ದಿನಾಂಕ: 17–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಮೃತ್ಯುಂಜಯ, (ನಿವೃತ್ತ) ಕೆ.ಎ.ಎಸ್, ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ದಿನಾಂಕ: 01–05–2007 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 11,400–21,600 ರಲ್ಲಿ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ. (ಸೇವೆಗಳು–3).

ಪಿ.ಆರ್. 604

## ಕಂದಾಯ ಸಚಿವಾಲಯ

**ವಿಷಯ :** ಧಾರವಾಡ ಜಿಲ್ಲೆಯ ಕಲಘಟಗಿ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 71 ಮುಸರ 2009, ದಿನಾಂಕ: 25–02–2009
2. ಸರ್ಕಾರದ ಆದೇಶ ಸಂಖ್ಯೆ ಕಂಇ 71 ಮುಸರ 2009 ದಿನಾಂಕ: 03–12–2009

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಧಾರವಾಡ ಜಿಲ್ಲೆಯ ಕಲಘಟಗಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರಿಂದ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಕಲಘಟಗಿ, ವಿಧಾನಸಭಾ ಕೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜನಿಯಿಂಗ್ ವಿಭಾಗ, ಧಾರವಾಡ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕಲಘಟಗಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ನಾಲ್ಕು ಜನ ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ನಂತರ, ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಈ ಕೆಳಕಂಡ ನಾಲ್ಕು ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿತ್ತು.

| | | |
|---|---|---|
| 1 | ಶ್ರೀ ಶಿವಪ್ಪ ವೀರಭದ್ರಪ್ಪ ಹುರಕಡ್ಡಿ ಮಿಶ್ರಿಕೋಟಿ, ಕಲಘಟಗಿ ತಾಲ್ಲೂಕು (ಸಾಮಾನ್ಯ) | ಸದಸ್ಯರು |
| 2 | ಶ್ರೀಮತಿ ಶೋಭಾ ಅಶೋಕ ಕಾರೇಕರ ಸಂಗೇಶ್ವರ, ಕಲಘಟಗಿ ತಾಲ್ಲೂಕು (ಮಹಿಳೆ) | ಸದಸ್ಯರು |
| 3 | ಶ್ರೀ ನಿಂಗಪ್ಪ ತಾಯಿ ಕರೆವ್ವ ಹರಿಜನ ಸೋಲಾರಗೊಪ್ಪ, ಕಲಘಟಗಿ ತಾಲ್ಲೂಕು (ಪ. ಜಾತಿ) | ಸದಸ್ಯರು |
| 4 | ಶ್ರೀ ವಿಠ್ಠಲ ಲಕ್ಷ್ಮಣ ವಂಡಕರ, ಗಳಗಿಹುಲಕೊಪ್ಪ. ಕಲಘಟಗಿ ತಾಲ್ಲೂಕು (ಪ. ಪಂಗಡ) | ಸದಸ್ಯರು |

ಆ ಹಿನ್ನೆಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 2 ಮುಸರ 2012; ಬೆಂಗಳೂರು, ದಿನಾಂಕ: 09ನೇ ಫೆಬ್ರವರಿ 2012**

ಧಾರವಾಡ ಜಿಲ್ಲೆಯ ಕಲಘಟಗಿ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ ಕಂಇ 71 ಮುಸರ 2009 ದಿನಾಂಕ: 03–12–2009 ನ್ನು ಭಾಗಶಃ ಮಾರ್ಪಡಿಸಿ ಅಧಿಕಾರೇತರ ನೇಮಕಾತಿ ರದ್ದುಪಡಿ, ಸದರಿ ಆರಾಧನಾ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ವಿರುಪಾಕ್ಷಗೌಡ ರುದ್ರಗೌಡ ಪಾಟೀಲ, ಸಾ|| ಸೂರಶೆಟ್ಟಿಕೊಪ್ಪ, ಕಲಘಟಗಿ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ರೋಹಿಣಿ ಶಿವಾಜಿ ಡೊಳ್ಳಿನ, ಸಾ|| ಹುಲ್ಲಿಕೇರಿ, ಕಲಘಟಗಿ ತಾಲ್ಲೂಕು | ಮಹಿಳೆ |
| 3 | ಶ್ರೀ ಅರ್ಜುನ್ ವಾಚಪ್ಪ ಲಮಾಣಿ, ಸಾ|| ಬಿ. ಶಿಗಿಗಟ್ಟಿ, ಕಲಘಟಗಿ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಕಲ್ಲಪ್ಪ ನಿಂಗಪ್ಪ ಮುಶೆಪ್ಪನವರ, ಸಾ|| ಬಾಡ, ಧಾರವಾಡ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 605 ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರದ ಆದೇಶ ಸಂಖ್ಯೆ : ಕಂಇ 23 ಮುಸರ 2009, ದಿನಾಂಕ: 25-02-2009,

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಮೊಳಕಾಲ್ಮೂರು, ವಿಧಾನಸಭಾ ಕೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜನಿಯರಿಂಗ್ ವಿಭಾಗ, ಚಿತ್ರದುರ್ಗ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಮೊಳಕಾಲ್ಮೂರು ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಸದಸ್ಯ ಕಾರ್ಯದರ್ಶಿ |
| 5 | ಶ್ರೀ ಜಿ.ಬಿ. ಅಗರೇಗೌಡ ಬಿನ್ ಬಸಬಲಿಂಗನಗೌಡ, ಗೌರಸಮುದ್ರ ಗ್ರಾಮ, ಸಿದ್ದಾಪುರ ಅಂಚೆ, ಮೊಳಕಾಲ್ಮೂರು ತಾಲ್ಲೂಕು (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ಸುಧಾರತ್ನ ಕೋಂ ಹೆಚ್.ಜಿ. ಚಂದ್ರಪ್ಪ, ಕೊಂಡ್ಲಹಳ್ಳಿ, ಮೊಳಕಾಲ್ಮೂರು ತಾಲ್ಲೂಕು (ಮಹಿಳೆ) | ಸದಸ್ಯರು |
| 7 | ಶ್ರೀ ಕೆ. ತಿಪ್ಪೇಸ್ವಾಮಿ ಬಿನ್ ಕರಿಯಪ್ಪ ಅಂಬೇಡ್ಕರ್ ಕಾಲೋನಿ, ಮೊಳಕಾಲ್ಮೂರು ಟೌನ್, ಚಿತ್ರದುರ್ಗ (ಪ.ಜಾತಿ) | ಸದಸ್ಯರು |
| 8 | ಶ್ರೀ ಎಂ. ತಿಪ್ಪೇಸ್ವಾಮಿ ಬಿನ್ ಮಾರಯ್ಯ, ಕೊಮ್ಮನಪಟ್ಟೆ, ಹಾನಗಲ್ ಅಂಚೆ, ಮೊಳಕಾಲ್ಮೂರು ತಾಲ್ಲೂಕು (ಪ. ಪಂಗಡ) | ಸದಸ್ಯರು |

ನಂತರ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 01 ಮುಸರ 2012; ಬೆಂಗಳೂರು, ದಿನಾಂಕ: 09ನೇ ಫೆಬ್ರವರಿ 2012**

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ ಕಂಇ 23 ಮುಸರ 2009 ದಿನಾಂಕ: 25-02-2009ನ್ನು ಭಾಗಶಃ ಮಾರ್ಪಡಿಸಿ ಅಧಿಕಾರೇತರ ನಾಮ ನಿರ್ದೇಶನ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರರ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಅಗರೇಗೌಡ, ಮಾಜಿ ಗ್ರಾಮ ಪಂಚಾಯಿತಿ ಅಧ್ಯಕ್ಷರು, ಗೌರಸಮುದ್ರ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಸಾಮಾನ್ಯ |
| 2 | ಶ್ರೀಮತಿ ಸುಧಾರತ್ನ ಕೋಂ ಶ್ರೀ ಚಂದ್ರಣ್ಣ, ಕೊಂಡ್ಲಹಳ್ಳಿ ಅಂಚೆ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಮಹಿಳೆ |
| 3 | ಶ್ರೀ ಕೆ. ತಿಪ್ಪೇಸ್ವಾಮಿ, ಅಂಬೇಡ್ಕರ್ ಕಾಲೋನಿ, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಪರಿಶಿಷ್ಟ ಜಾತಿ |
| 4 | ಶ್ರೀ ಸಿದ್ದಪ್ಪ ಬಿನ್ ಬೊಮ್ಮಯ್ಯ, ಹಳೇಕೆರೆ ಹಾನಗಲ್ಲು, ಮೊಳಕಾಲ್ಮೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 606 ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** **1.** ಸರ್ಕಾರದ ಆದೇಶ ಸಂಖ್ಯೆ : ಕಂಇ 85 ಮುಸರ 2009, ದಿನಾಂಕ: 25–02–2009,

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಚಿಂಚೋಳಿ ವಿಧಾನಸಭಾ ಕೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಗುಲ್ಬರ್ಗಾ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಚಿಂಚೋಳಿ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಚಿಂಚೋಳಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 06 ಮುಸರ 2012; ಬೆಂಗಳೂರು, ದಿನಾಂಕ: 09ನೇ ಫೆಬ್ರವರಿ 2012**

ಗುಲ್ಬರ್ಗಾ ಜಿಲ್ಲೆಯ ಚಿಂಚೋಳಿ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ವೀರಭದ್ರಪ್ಪಾ ಬಿನ್ ಗುರುದೇವಪ್ಪಾ ಮಲಕೂಡ, ಪೋ॥ ಗಾರಂಪಳ್ಳಿ, ತಾ॥ ಚಿಂಚೋಳಿ, ಜಿ॥ ಗುಲ್ಬರ್ಗಾ | ಸಾಮಾನ್ಯ |
| 2 | ಶ್ರೀಮತಿ ಸುಭದ್ರಮ್ಮಾ ಕೋಂ, ಬಸವರಾಜ ಬೇಳಕೇರಿ, ಚಂದಾಪೂರ, ಪೋ॥ ಗಣೇಶ ಮಂದಿರ ಹತ್ತಿರ, ತಾ॥ ಚಿಂಚೋಳಿ, ಜಿ॥ ಗುಲ್ಬರ್ಗಾ | ಮಹಿಳೆ |
| 3 | ಶ್ರೀ ರಾಮಣ್ಣಾ ದೇವಪ್ಪಾ ಗೌತಮ, ಹಸರಗುಂಡಗಿ, ಪೋ॥ ಹಸರಗುಂಡಗಿ, ತಾ॥ ಚಿಂಚೋಳಿ ಜಿ॥ ಗುಲ್ಬರ್ಗಾ | ಪರಿಶಿಷ್ಠ ಜಾತಿ |
| 4 | ಶ್ರೀಮತಿ ಶಾಂತಮ್ಮ ಕೋಂ ಜಗನ್ನಾಥ ಫತ್ತೇಪೂರ, ಫತ್ತೇಪೂರ, ಪೋ॥ ಐನೋಲಿ, ತಾ॥ ಚಿಂಚೋಳಿ, ಜಿ॥ ಗುಲ್ಬರ್ಗಾ | ಪರಿಶಿಷ್ಠ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 607 ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಹಾಸನ ಜಿಲ್ಲೆಯ ಹಾಸನ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 88 ಮುಸರ 2008, ದಿನಾಂಕ: 25–02–2009,

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಹಾಸನ ಜಿಲ್ಲೆಯ ಹಾಸನ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಹಾಸನ ವಿಧಾನಸಭಾ ಕೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಹಾಸನ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಹಾಸನ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಹಾಸನ ತಾಲ್ಲೂಕು, ಹಾಸನ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಮುಸರ 2011; ಬೆಂಗಳೂರು, ದಿನಾಂಕ: 09ನೇ ಫೆಬ್ರವರಿ 2012**

ಹಾಸನ ಜಿಲ್ಲೆಯ ಹಾಸನ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಬೋರೇಗೌಡ ಬಿನ್ ತಿಮ್ಮೇಗೌಡ, ಉದಯ ಪ್ರೌಢಶಾಲೆ ಪಕ್ಕ, ವಿಶ್ವೇಶ್ವರ ಬಡಾವಣೆ, ಹಾಸನ –573 201, ಹಾಸನ ಗ್ರಾಮಾಂತರ ಜಿಲ್ಲೆ | ಸಾಮಾನ್ಯ |
| 2 | ಶ್ರೀಮತಿ ಲೋಲಾಕ್ಷಿ ಕೋಂ ಕೆ.ಟಿ. ಅಣ್ಣೇಗೌಡ, ಚಿಕ್ಕಕೊಂಡಗುಳ ಕೊಪ್ಪಲು ಗ್ರಾಮ, ಕಸಬಾ ಹೋಬಳಿ, ಹಾಸನ–573 201, ಹಾಸನ ಗ್ರಾಮಾಂತರ ಜಿಲ್ಲೆ | ಮಹಿಳೆ |
| 3 | ಶ್ರೀ ಶಿವಣ್ಣ ಬಿನ್ ಮರಿಯಯ್ಯ, ಕಡದರವಳ್ಳಿ ಗ್ರಾಮ, ಸೀಗೆ ಅಂಚೆ, ಸಾಲಗಾಮೆ ಹೋಬಳಿ, ಹಾಸನ –573 201, | ಪರಿಶಿಷ್ಠ ಜಾತಿ |
| 4 | ಶ್ರೀ ಶಂಕರನಾಯಕ್ ಬಿನ್ ಕರೀಗೌಡ, ಬೊಮ್ಮೇನಹಳ್ಳಿ ಗ್ರಾಮ, ನಿಟ್ಟೂರು ಅಂಚೆ, ಸಾಲಗಾಮೆ ಹೋಬಳಿ, ಹಾಸನ –573 201, ಹಾಸನ ಗಾಮಾಂತರ ಜಿಲ್ಲೆ | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 608 ಕಂದಾಯ ಇಲಾಖೆ. (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ವಿಧಾನಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 112 ಮುಸರ 2008, ದಿನಾಂಕ: 25–02–2009,

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಿ ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಕೆ.ಆರ್. ಪೇಟೆ ವಿಧಾನಸಭಾ ಕೇತ್ರ. | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಮಂಡ್ಯ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಕೆ.ಆರ್. ಪೇಟೆ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಕೆ.ಆರ್. ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ | ಸದಸ್ಯ ಕಾರ್ಯದರ್ಶಿ |

ಮುಂದುವರೆದು, ಅಧಿಕಾರೇತರ ಸದಸ್ಯರನ್ನು ನಂತರ ನಾಮ ನಿರ್ದೇಶನ ಮಾಡಲಾಗುವುದೆಂದು ನಮೂದಿಸಲಾಗಿತ್ತು.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 52 ಮುಸರ 2011; ಬೆಂಗಳೂರು, ದಿನಾಂಕ: 09ನೇ ಫೆಬ್ರವರಿ 2012**

ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರಮ ಸಂ. | ಹೆಸರು / ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಪ್ರಭಾಕರ್ ಬಿ.ಎಂ. ಬಿನ್ ಮಹದೇವಪ್ಪ, ಬೂಕಹಳ್ಳಿ, ಬೂಕನಕೆರೆ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ವಿಜಯಲಕ್ಷ್ಮಿ ಕೋಂ ಬಾಲಕೃಷ್ಣ ಸ್ವಾಮಿ, ಮಾಚನಗೋನಹಳ್ಳಿ, ಬೂಕನಕೆರೆ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು | ಮಹಿಳೆ |
| 3 | ಶ್ರೀ ಎನ್. ಟಿ. ಚನ್ನಕೇಶವ ಬಿನ್ ಪುಟ್ಟಸ್ವಾಮಯ್ಯ, ನಾರ್ಗೋನಹಳ್ಳಿ, ಬೂಕನಕೆರೆ ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀ ಶಿವರಾಂನಾಯಕ್ ಬಿನ್ ಲಕ್ಷ್ಮಣನಾಯಕ, ಸಾಕ್ಷಿಬೀಡು, ಅಕ್ಕಿಹೆಬ್ಬಾಳು ಹೋಬಳಿ, ಕೆ.ಆರ್.ಪೇಟೆ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ: 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

ಪಿ.ಆರ್. 609

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಕಂಇ 68 ಮುಸರ 2009, ಬೆಂಗಳೂರು ದಿನಾಂಕ: 09.02.2012**

ಸರ್ಕಾರಿ ಆದೇಶ ಕಂಇ 68 ಮುಸರ 2009 ದಿನಾಂಕ: 27.07.2011ರಲ್ಲಿ **"ಬೆಳಗಾಂ ಜಿಲ್ಲೆ, ಸದಲಗಾ ವಿಧಾನಸಭಾ ಕ್ಷೇತ್ರ"** ಎಂಬುದರ ಬದಲಾಗಿ **"ಬೆಳಗಾಂ ಜಿಲ್ಲೆ ಚಿಕ್ಕೋಡಿ-ಸದಲಗಾ ವಿಧಾನಸಭಾ ಕ್ಷೇತ್ರ"** ಎಂಬುದನ್ನು ಸೇರಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

ಪಿ.ಆರ್. 610

## ಕಂದಾಯ ಸಚಿವಾಲಯ

**ಸುತ್ತೋಲೆ**

**ಸಂಖ್ಯೆ: ಕಂಇ 57 ಎಎಸ್‌ಡಿ 2012 ದಿನಾಂಕ: 10.02.2012.**

ಕಂದಾಯ ಇಲಾಖೆಯ ತಾಲ್ಲೂಕು ಮಟ್ಟದಲ್ಲಿನ ತಾಲ್ಲೂಕು ಕಛೇರಿಗಳಲ್ಲಿ ಮತ್ತು ಉಪ ವಿಭಾಗ ಮಟ್ಟದ ಉಪ ವಿಭಾಗಾಧಿಕಾರಿಗಳ ಕಛೇರಿಗಳಲ್ಲಿನ ಕಾರ್ಯಭಾರ ಜವಾಬ್ದಾರಿಯನ್ನು ಕಡಿಮೆ ಮಾಡಿ ಅಧಿಕಾರ ವಿಕೇಂದ್ರೀಕರಣಗೊಳಿಸಿ, 176 ತಾಲ್ಲೂಕುಗಳಲ್ಲಿ ತಹಶೀಲ್ದಾರ್ ಕಾರ್ಯಾಲಯದಲ್ಲಿರುವ ಒಂದು ಶಿರಸ್ತೇದಾರ್ ಹುದ್ದೆಯನ್ನು ಮತ್ತು 52 ಉಪ ವಿಭಾಗಾಧಿಕಾರಿಗಳ ಕಾರ್ಯಾಲಯದಲ್ಲಿರುವ ಒಂದು ವ್ಯವಸ್ಥಾಪಕರ ಹುದ್ದೆಯನ್ನು ಒಳಗೊಂಡಂತೆ ಒಟ್ಟು 228 ಶಿರಸ್ತೇದಾರ್ / ಉಪ ತಹಶೀಲ್ದಾರ್‌ಗಳ ಹುದ್ದೆಯನ್ನು ತಹಶೀಲ್ದಾರ್ ಗ್ರೇ-2 ಅಥವಾ ಗ್ರೇಡ್-ಬಿ ಹುದ್ದೆಗೆ ಸರ್ಕಾರವು ಸಂಖ್ಯೆ: ಕಂಇ 209 ಎಂವಿಎಸ್2002(1) ದಿನಾಂಕ: 3-6-2011ರ ಸರ್ಕಾರಿ ಆದೇಶದಲ್ಲಿ ಉನ್ನತೀಕರಿಸಲಾಗಿರುತ್ತದೆ.

ತಾಲ್ಲೂಕು ಮಟ್ಟದಲ್ಲಿ ತಹಶೀಲ್ದಾರ್ (ರೆಗ್ಯುಲರ್) ಮತ್ತು ತಹಶೀಲ್ದಾರ್ (ಗ್ರೇಡ್-2) ಇವರುಗಳು ಮತ್ತು ಉಪ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ತಹಶೀಲ್ದಾರ್ ಗ್ರೇಡ್-2 ವೃಂದದ ಅಧಿಕಾರಿಗಳು ನಿರ್ವಹಿಸಬೇಕಾಗಿರುವ ಕಾರ್ಯಭಾರ ಹಂಚಿಕೆಯನ್ನು ಸಂಖ್ಯೆ: ಕಂಇ 209 ಎಂವಿಎಸ್ 2002(1) ದಿನಾಂಕ: 3-12-2011ರ ಸರ್ಕಾರಿ ಆದೇಶದಲ್ಲಿ ಹೊರಡಿಸಲಾಗಿರುತ್ತದೆ.

ಸರ್ಕಾರವು ದಿನಾಂಕ: 30-1-2012ರ ಸಂಖ್ಯೆ: ಕಂಇ 301 ಎಎಸ್‌ಡಿ 2011ರ ಅಧಿಸೂಚನೆಯಲ್ಲಿ 190 ಶಿರಸ್ತೇದಾರ್/ಉಪ ತಹಶೀಲ್ದಾರ್ ಗಳಿಗೆ ತಹಶೀಲ್ದಾರ್ ಗ್ರೇಡ್-2 ವೃಂದಕ್ಕೆ ಮುಂಬಡ್ತಿ ನೀಡಿ, 74 ತಾಲ್ಲೂಕು ಕಛೇರಿಗಳಲ್ಲಿ ಹಾಗೂ ಉಪವಿಭಾಗಾಧಿಕಾರಿಗಳ ಕಛೇರಿಗಳಲ್ಲಿ ತಹಶೀಲ್ದಾರ್ ಗ್ರೇಡ್-2 ಹುದ್ದೆಗಳಿಗೆ ನೇಮಕ ಮಾಡಿರುತ್ತದೆ. ತತ್ಪರಿಣಾಮವಾಗಿ, ಈ ಕಛೇರಿಗಳಲ್ಲಿ ಅನುಕ್ರಮವಾಗಿ ರದ್ದಾಗಿರುವ ಶಿರಸ್ತೇದಾರ್ (ಆಡಳಿತ) ಹಾಗೂ ವ್ಯವಸ್ಥಾಪಕರ ಹುದ್ದೆಗಳ ಕಾರ್ಯಭಾರವನ್ನು ಈ ಕೆಳಕಂಡಂತೆ ಕಾರ್ಯನಿರ್ವಹಿಸಲು ಆದೇಶಿಸಲಾಗಿದೆ.

1. ಶಿರಸ್ತೇದಾರ್ (ಆರ್‌ಆರ್): ತಮ್ಮ ಕರ್ತವ್ಯದೊಂದಿಗೆ ತಾಲ್ಲೂಕು ಶಿರಸ್ತೇದಾರ್‌ರವರು ನಿರ್ವಹಿಸುತ್ತಿದ್ದ ಕಾರ್ಯವನ್ನು ನಿರ್ವಹಿಸಿ ದಿನಾಂಕ: 3-12-2011 ರ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾದಂತೆ ತಹಶೀಲ್ದಾರ್ ಗ್ರೇಡ್-1 ಮತ್ತು ಗ್ರೇಡ್-2 ರವರಿಗೆ ಸಲ್ಲಿಸತಕ್ಕದ್ದು.

2. ಶಿರಸ್ತೇದಾರ್ (ಸಾಮಾಜಿಕ ಭದ್ರತೆ): ದಿನಾಂಕ: 3–12–2011ರ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾದಂತೆ ಗ್ರೇಡ್–2 ರವರಿಗೆ ಸಲ್ಲಿಸತಕ್ಕದ್ದು.
3. ಶಿರಸ್ತೇದಾರ್ (ಚುನಾವಣೆ): ದಿನಾಂಕ: 3–12–2011ರ ಸರ್ಕಾರಿ ಆದೇಶದಲ್ಲಿ ಹಂಚಿಕೆಯಾದಂತೆ ತಹಶೀಲ್ದಾರ್ ಗ್ರೇಡ್–1 ಮತ್ತು ಗ್ರೇಡ್–2 ರವರಿಗೆ ಸಲ್ಲಿಸತಕ್ಕದ್ದು.

ಇದೇ ರೀತಿ ಉಪವಿಭಾಗಾಧಿಕಾರಿಗಳ ಕಛೇರಿಯಲ್ಲಿನ ಪ್ರಥಮ ದರ್ಜೆ ಸಹಾಯಕರುಗಳಲ್ಲಿ ಜೇಷ್ಠತೆಯಲ್ಲಿ ಹಿರಿಯರಾದವರು ಈ ಹಿಂದೆ ವ್ಯವಸ್ಥಾಪಕರು ನಿರ್ವಹಿಸುತ್ತಿದ್ದ ಕಾರ್ಯಗಳನ್ನು ನಿರ್ವಹಿಸಿ ತಹಶೀಲ್ದಾರ್ ಗ್ರೇಡ್ – 2ರವರಿಗೆ ಸಲ್ಲಿಸತಕ್ಕದ್ದು.

**ಎನ್ ಗೋಪಾಲಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಸೇವೆಗಳು–3).

ಪಿ.ಆರ್. 611

## ಕಂದಾಯ ಸಚಿವಾಲಯ

**ವಿಷಯ :** ಬಾಗಲಕೋಟೆಯಲ್ಲಿ ಮಿನಿ ವಿಧಾನಸೌಧ ನಿರ್ಮಿಸುವ ಬಗ್ಗೆ.

**ಓದಲಾಗಿದೆ :** **1**. ಪತ್ರ ಸಂಖ್ಯೆ: ಆರ್‌ಬಿ/ಎಡಿಎಂ/1/ಸಿಆರ್–62/2005–06, ದಿನಾಂಕ 14/09/2011.
**2**. ಪತ್ರ ಸಂಖ್ಯೆ: ಆರ್‌ಬಿ/ಎಡಿಎಂ/1/ಸಿಆರ್–62/2005–06, ದಿನಾಂಕ 24/12/2011.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಬಾಗಲಕೋಟೆ ಇವರು (1) ಮತು (2)ರಲ್ಲಿ ಓದಲಾದ ಪತ್ರ ಬರೆಯುತ್ತಾ ಕಂದಾಯ ಉಪ ವಿಭಾಗ, ತಾಲ್ಲೂಕು ಕಛೇರಿ, ತಾಲ್ಲೂಕು ಪಂಚಾಯತ್ ಕಛೇರಿ, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ತೋಟಗಾರಿಕೆ ಸಹಾಯಕ ನಿರ್ದೇಶಕರ ಕಛೇರಿ, ಉಪ ನೋಂದಣಾಧಿಕಾರಿ ಕಛೇರಿ, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ ಇವುಗಳಿಗೆ ಒಂದೇ ಕಟ್ಟಡದಲ್ಲಿ ಸ್ಥಳಾವಕಾಶ ಕಲ್ಪಿಸಲು ಸೆಕ್ಟರ್ ನಂ. 22ರಲ್ಲಿ 4.12 ಎಕರೆ ವಿಸ್ತೀರ್ಣದ ಭೂಮಿಯಲ್ಲಿ ಮಿನಿ ವಿಧಾನಸೌಧ ಕಟ್ಟಡವನ್ನು ರೂ. 499.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ನಿರ್ಮಿಸುವ ಸಲುವಾಗಿ ಕರ್ನಾಟಕ ಗೃಹ ಮಂಡಳಿ ತಯಾರಿಸಿರುವ ರೇಖಾ ಅಂದಾಜುಗಳ ಆಧಾರದ ಮೇಲೆ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ.

ಆ ಹಿನ್ನೆಲೆಯಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 77 ಡಬ್ಲ್ಯೂ ಬಿಆರ್ 2011, ಬೆಂಗಳೂರು, ದಿನಾಂಕ: 09/02/2012.**

ಬಾಗಲಕೋಟೆ ನಗರ ನವನಗರದ ಸೆಕ್ಟರ್ 22 ರಲ್ಲಿ 4.12 ಎಕರೆ ವಿಸ್ತೀರ್ಣದ ಜಮೀನಿನಲ್ಲಿ ರೂ. 499.00 ಲಕ್ಷಗಳ (ರೂಪಾಯಿ ನಾಲ್ಕುನೂರ ತೊಂಭತ್ತೊಂಭತ್ತು ಲಕ್ಷಗಳು ಮಾತ್ರ) ಅಂದಾಜು ವೆಚ್ಚದಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಉದ್ದೇಶಿತ ಕಟ್ಟಡ ಕಾಮಗಾರಿಗಳಿಗೆ ನಕ್ಷೆ ಹಾಗೂ ಅಂದಾಜುಗಳ ಪಟ್ಟಿ ತಯಾರಿಸಿಕೊಂಡು ಆಡಳಿತಾತ್ಮಕ ಅನುಮೋದನೆ ಪಡೆಯತಕ್ಕದ್ದು.

ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿತವಾಗಿರುವ ಆರ್ಥಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂ ಸುಧಾರಣೆ ಕೋಶ)

ಪಿ.ಆರ್. 612

## ಕಂದಾಯ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಕೇಂದ್ರದಲ್ಲಿ ಮಿನಿ ವಿಧಾನಸೌಧ ಕಟ್ಟಡದ ಎರಡನೇ ಹಂತದ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** **1**. ಸರ್ಕಾರದ ಆದೇಶ ಸಂಖ್ಯೆ 70 ಡಬ್ಲ್ಯೂಬಿಆರ್ 2007, ದಿನಾಂಕ 07/05/2007
**2**. ಸರ್ಕಾರದ ಆದೇಶ ಸಂಖ್ಯೆ 55 ಡಬ್ಲ್ಯೂಬಿಆರ್ 2007, ದಿನಾಂಕ 02/07/2007
**3**. ಸರ್ಕಾರದ ಆದೇಶ ಸಂಖ್ಯೆ 22 ಡಬ್ಲ್ಯೂಬಿಆರ್ 2007, ದಿನಾಂಕ 27/08/2011
**4**. ಪತ್ರ ಸಂಖ್ಯೆ ಮುಅ/ಸಂಕದ/ಸಿ–6/2011–12, ದಿನಾಂಕ 09/12/2011.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಕೇಂದ್ರ ಸೇರಿದಂತೆ ಒಟ್ಟು 9 ತಾಲ್ಲೂಕು ಕೇಂದ್ರಗಳಲ್ಲಿ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣದ ಕಾಮಗಾರಿಗೆ ರೂ.200.00 ಲಕ್ಷಗಳಿಗೆ ಕಾಮಗಾರಿ ಅಂದಾಜುಪಟ್ಟಿ ಹಾಗೂ ನಕ್ಷೆಯನ್ನು ಸರ್ಕಾರಕ್ಕೆ ಸಲ್ಲಿಸುವ ಷರತ್ತಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡುವುದರೊಂದಿಗೆ ತಲಾ ರೂ.200.00 ಲಕ್ಷಗಳಂತೆ ರೂ.18.00 ಕೋಟಿ ಅನುದಾನವನ್ನು ಲೋಕೋಪಯೋಗಿ ಇಲಾಖೆಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಕೇಂದ್ರದಲ್ಲಿ ನಿರ್ಮಿಸುತ್ತಿರುವ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣ ಕಾಮಗಾರಿಗೆ ರೂ.200.00 ಲಕ್ಷಗಳ ಅಂದಾಜು ಪಟ್ಟಿಗೆ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಕೇಂದ್ರದಲ್ಲಿ ನಿರ್ಮಿಸುತ್ತಿರುವ ಮಿನಿ ವಿಧಾನಸೌಧ ಕಟ್ಟಡದ ಬೇಸ್ ಮೆಂಟ್ ಮತ್ತು ನೆಲಮಾಳಿಗೆಯ ರೂ.3,73,68,548.00 ಗಳ ಪರಿಷ್ಕೃತ ಕಾಮಗಾರಿ ಅಂದಾಜಿಗೆ, ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರು ರವರು ಮೇಲೆ (4)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ವರದಿ ಮಾಡುತ್ತಾ, ಪುತ್ತೂರು ಮಿನಿ ವಿಧಾನಸೌಧ ಕಟ್ಟಡಕ್ಕೆ ಮೊದಲನೆಯ ಮತ್ತು ಎರಡನೆಯ ಮಹಡಿಯನ್ನು ನಿರ್ಮಾಣ ಮಾಡಲು ರೂ. 450.0 ಲಕ್ಷ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರುತ್ತಾ ಸವಿವರ ಅಂದಾಜು ಪಟ್ಟಿಯನ್ನು ಒದಗಿಸಿದ್ದಾರೆ.

ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಕಂಷವಾಗಿ ಪರಿಶೀಲಿಸಿದ ನಂತರ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ಮಿನಿ ವಿಧಾನಸೌಧ ಕಟ್ಟಡದ ಮೊದಲನೆಯ ಮತ್ತು ಎರಡನೆಯ ಮಹಡಿಯ ಎರಡನೇ ಹಂತದ ರೂ. 450.00 ಲಕ್ಷ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 22 ಡಬ್ಲ್ಯೂ ಬಿಆರ್ 2011, ಬೆಂಗಳೂರು, ದಿನಾಂಕ: 01/02/2012**

ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕು ಕೇಂದ್ರದಲ್ಲಿ ನಿರ್ಮಿಸುತ್ತಿರುವ ಮಿನಿ ವಿಧಾನಸೌಧ ಕಟ್ಟಡದ ಮೊದಲನೆಯ ಮತ್ತು ಎರಡನೆಯ ಮಹಡಿಯ ಎರಡನೇ ಹಂತದ ರೂ. 450.00 ಲಕ್ಷ (ರೂಪಾಯಿ ನಾಲ್ಕುನೂರ ಐವತ್ತು ಲಕ್ಷಗಳು ಮಾತ್ರ)ಗಳ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 4059–80–051–0–30–386 (ಯೋಜನೆ) ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000ರ ಪ್ರಕಾರ ಮಾಡತಕ್ಕದ್ದು.

ಈ ಕಾಮಗಾರಿಯನ್ನು ನಿಗದಿತ ಕಾಲ ಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ಕಾಮಗಾರಿಯಲ್ಲಿ ಯಾವುದೇ ಬದಲಾವಣೆ ಅಥವಾ ಹೆಚ್ಚುವರಿ ಐಟಂಗಳನ್ನು ಸೇರಿಸತಕ್ಕದ್ದಲ್ಲ.

ಸಕ್ಷಮ ಪ್ರಾಧಿಕಾರವು ಸದರಿ ಕಟ್ಟಡ ಕಾಮಗಾರಿಯ ಗುಣಮಟ್ಟ ಕಾಯ್ದುಕೊಳ್ಳುವಿಕೆಯನ್ನು ಕಾಲಕಾಲಕ್ಕೆ ಖಾತರಿಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿತ ಆರ್ಥಿಕ ಅಧಿಕಾರಗಳಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಭೂ ಸುಧಾರಣಾ ಕೋಶ)

ಪಿ.ಆರ್. 613

## ಕಂದಾಯ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಕಂಇ 299 ಮುಅಬಿ 2011 ಬೆಂಗಳೂರು ದಿನಾಂಕ: 21–02–2012**

ಸರ್ಕಾರಿ ಆದೇಶ ಸಂಖ್ಯೆ: ಕಂಇ 01 ಮುಅಬಿ 2006 ದಿನಾಂಕ: 03–06–2006ರ ಅನುಬಂಧದ ಕ್ರಮ ಸಂಖ್ಯೆ (3)ರಲ್ಲಿ "ಸರ್ಕಾರದ ಧನ ಸಹಾಯ ಪಡೆಯಲು ಇಚ್ಛಿಸುವ ಯಾತ್ರಿಕರು ತಾವು ಯಾತ್ರೆ ಮುಗಿಸಿದ್ದಕ್ಕೆ ಪಡೆಯುವ ಪ್ರಮಾಣ ಪತ್ರದ ದಿನಾಂಕದಿಂದ ಎರಡು ತಿಂಗಳೊಳಗೆ ಧಾರ್ಮಿಕ ದತ್ತಿ ಆಯುಕ್ತರವರಿಗೆ ಅರ್ಜಿ ಸಲ್ಲಿಸಬೇಕು" ಎಂಬುದರ ಬದಲಾಗಿ "ಸರ್ಕಾರದ ಧನ ಸಹಾಯ ಪಡೆಯಲು ಇಚ್ಛಿಸುವ ಯಾತ್ರಿಕರು ತಾವು ಯಾತ್ರೆ ಮುಗಿಸಿದ್ದಕ್ಕೆ ಪಡೆಯುವ ಪ್ರಮಾಣ ಪತ್ರದ ದಿನಾಂಕದಿಂದ ನಾಲ್ಕು ತಿಂಗಳೊಳಗೆ ಧಾರ್ಮಿಕ ದತ್ತಿ ಆಯುಕ್ತರವರಿಗೆ ಅರ್ಜಿ ಸಲ್ಲಿಸಬೇಕು" ಎಂಬುದನ್ನು ಸೇರಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

ಪಿ.ಆರ್. 614

## ಕಂದಾಯ ಸಚಿವಾಲಯ

**ವಿಷಯ :** ನಾಡ ಕಛೇರಿಗಳ ಉಪ ತಹಶೀಲ್ದಾರರಿಗೆ ಅಧಿಕಾರ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 239 ಎಎಸ್‌ಜಿ 1980, ದಿನಾಂಕ: 10/09/1981
2. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 239 ಎಎಸ್‌ಜಿ 1980, (ಭಾಗ) ದಿನಾಂಕ: 11/11/1982
3. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 93 ಎಎಸ್‌ಡಿ 1986, ದಿನಾಂಕ: 14/07/1986
4. ಸರ್ಕಾರಿ ಆದೇಶ ಸಂಖ್ಯೆ ಆರ್‌ಡಿ 264 ಎಎಸ್‌ಡಿ 1986, ದಿನಾಂಕ: 12/8/1988
5. ಸರ್ಕಾರಿ ಆದೇಶ ಸಂಖ್ಯೆ: ಕಂಇ375 ಬಿಎಮ್ ಎಮ್ 2002, ದಿನಾಂಕ:18/01/2011

**ಪ್ರಸ್ತಾವನೆ :**

ಕಂದಾಯ ಇಲಾಖೆಯ ಆಡಳಿತವನ್ನು ಬಲಪಡಿಸುವ ದೃಷ್ಟಿಯಿಂದ ಹಾಗೂ ಹೋಬಳಿ ಮಟ್ಟದಲ್ಲಿ ಆಡಳಿತವನ್ನು ಅಧಿಕಾರವನ್ನು ವಿಕೇಂದ್ರೀಕರಣಗೊಳಿಸಿ ಸರ್ಕಾರವು ಮೇಲೆ ಓದಲಾದ ಕ್ರಮಸಂಖ್ಯೆ (1)ರಿಂದ(4) ರನ್ವಯ ಒಟ್ಟು 329 ನಾಡ ಕಛೇರಿಗಳನ್ನು ಸ್ಥಾಪಿಸಿದ್ದು, ಅವುಗಳು ಕೆಳಗಿನಂತೆ ಸಿಬ್ಬಂದಿ ಮತ್ತು ಅಧಿಕಾರಗಳ ಪ್ರತ್ಯಾಯೋಜನೆಯೊಂದಿಗೆ ಕಾರ್ಯ ನಿರ್ವಹಿಸುತ್ತಿರುತ್ತವೆ.

**ಸಿಬ್ಬಂದಿ**

1. ಉಪತಹಶೀಲ್ದಾರ್–1 ಹುದ್ದೆ
2. ದ್ವಿತೀಯ ದರ್ಜೆ ಸಹಾಯಕರು–1 ಹುದ್ದೆ

3. ಬೆರಳಚ್ಚುಗಾರರು–1 ಹುದ್ದೆ
4. ಡಿ–ದರ್ಜೆ–1 ಹುದ್ದೆ

ನಾಡ ಕಛೇರಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರಗಳು

1. ವೃದ್ಯಾಪ್ಯ ವೇತನ ಮಂಜೂರಾತಿ
2. ವಿಧವಾ ವೇತನ ಮಂಜೂರಾತಿ
3. ಅಂಗವಿಕಲರಿಗೆ ಭತ್ಯೆ ಮಂಜೂರಾತಿ
4. ಸಂಧ್ಯಾ ಸುರಕ್ಷಾ ಯೋಜನೆ
5. ಸರ್ಕಾರಿ ಬಾಕಿ ವಸೂಲಾತಿ ಮತ್ತು ಜಮ ಹಾಗೂ ಡಿಸಿಬಿ ಲೆಕ್ಕಗಳ ನಿರ್ವಹಣೆ
6. ದರಖಾಸ್ತು ರೆಕಾರ್ಡ್‌ಗಳ ತಯಾರಿಕೆ
7. ಪ್ರವಾಹ ಮತ್ತು ಬೆಂಕಿ ಅಪಘಾತಗಳಲ್ಲಿ ನೊಂದವರಿಗೆ ಪರಿಹಾರ ಧನ ನೀಡುವಿಕೆ
8. ಎಲ್ಲಾ ವಿಧವಾದ ದೃಢೀಕರಣ ಪತ್ರ (All types of certified copies)
9. ಅಧಿಕೃತ ವ್ಯವಸಾಯಗಾರರಿಗೆ ದೃಢೀಕರಣ ಪತ್ರ ನೀಡುವಿಕೆ
10. ಮುಜರಾಯಿ ಸಂಸ್ಥೆಗಳ ನಿರ್ವಹಣೆ ಮತ್ತು ತನಿಖೆ
11. ಗ್ರಾಮಲೆಕ್ಕಿಗರ ಮತ್ತು ಕಂದಾಯ ನಿರೀಕ್ಷಕರುಗಳ ತನಿಖೆ
12. ಪಡಿತರ ಕಾರ್ಡುಗಳ ನೀಡಿಕೆ
13. ಸಣ್ಣ, ಅತಿಸಣ್ಣ ರೈತರಿಗೆ ಧೃಡೀಕೃತ ಪತ್ರ ನೀಡುವಿಕೆ
14. ಸ್ವಾಧೀನ ಪ್ರಕರಣಗಳ ಕಡತಗಳ ತಯಾರಿಕೆ
15. ಗ್ರಾಮಲೆಕ್ಕಿಗರ ಕೈಪುಸ್ತಕದ ಪುಟ 3(15) ರೀತ್ಯಾ ಗ್ರಾಮದ ಅಂಕಿ ಅಂಶಗಳನ್ನು ನಾಡ ಕಛೇರಿಯಲ್ಲಿ ನಿರ್ವಹಿಸುವ ಬಗ್ಗೆ.
16. ಜನನ ಮತ್ತು ಮರಣ ದಾಖಲೆಗಳ ನಿರ್ವಹಣೆ
17. ಪ್ರತಿವರ್ಷ 10 ಪ್ರತಿಶತ ಹಳ್ಳಿಗಳಲ್ಲಿ 2 ಮುಖ್ಯ ಬೆಳೆ ಕಟಾವು ಪ್ರಯೋಗವನ್ನು ಮಾಡುವುದು
18. ಗ್ರಾಮ ಲೆಕ್ಕಿಗರು ಮತ್ತು ಸ್ವಾಧೀನದಲ್ಲಿರುವ ಮತ್ತಿತರಿಗೆ ಸಾಂದರ್ಭಿಕ ರಜೆ
19. ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 94, 104, 127, 129 ಮತ್ತು 164 ರಡಿ ಕ್ರಮ ತೆಗೆದುಕೊಳ್ಳುವ ಅಧಿಕಾರ

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿನ ಆದೇಶದಲ್ಲಿ ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ 329 ನಾಡ ಕಛೇರಿಗಳನ್ನು ರದ್ದುಪಡಿಸಬೇಕೆಂಬ ಆಡಳಿತ ಸುಧಾರಣಾ ಆಯೋಗದ ಶಿಫಾರಸ್ಸನ್ನು ಕೈ ಬಿಟ್ಟು ಪ್ರತಿ ನಾಡ ಕಛೇರಿಯಲ್ಲಿ ಭೂಮಿ ಕಿಯೋಸ್ಕಗಳನ್ನು ಪ್ರಾರಂಭಿಸುವುದರೊಂದಿಗೆ ಅವುಗಳಿಗೆ ಸಂಬಂದಿಸಿದ ಎಲ್ಲ ಮೇಲ್ವಿಚಾರಣೆ ಹಾಗೂ ನಿರ್ವಹಣೆಗಳ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಎಲ್ಲ 329 ನಾಡ ಕಛೇರಿಗಳನ್ನು ಮುಂದುವರಿಸಲಾಗಿದೆ.

ಗ್ರಾಮೀಣ ಪ್ರದೇಶಗಳಲ್ಲಿ ಸಾರ್ವಜನಿಕರು ತಮ್ಮ ದಿನನಿತ್ಯದ ಬದುಕಿಗೆ ಹತ್ತು ಹಲವು ಸೇವೆಗಳನ್ನು ಪಡೆಯಲು ತಾಲ್ಲೂಕು ಕಛೇರಿಗೆ ಭೇಟಿ ನೀಡುವುದನ್ನು ತಪ್ಪಿಸುವುದು ಅತ್ಯಾವಶ್ಯಕವಾಗಿರತ್ತದೆ ಈ ನಿಟ್ಟಿನಲ್ಲಿ ಸಾರ್ವಜನಿಕರಿಗೆ ಅಗತ್ಯವಾದ ಸೇವೆಗಳನ್ನು ಒದಗಿಸುವ ಅಧಿಕಾರವನ್ನು ವಿಕೇಂದ್ರೀಕರಣಗೊಳಿಸುವುದು ಮತ್ತು ನಾಡ ಕಛೇರಿ ಉಪ ತಹಶೀಲ್ದಾರರಿಗೆ ಈಗಿರುವ ಸೇವೆಗಳನ್ನು ನೀಡುವ ಅಧಿಕಾರದ ಜೊತಗೆ ಸಾರ್ವಜನಿಕರಿಗೆ ಅಗತ್ಯವಾದ ಇತರೇ ಅಧಿಕಾರಗಳನ್ನು ಪ್ರತ್ಯಾಯೋಜಿಸುವುದರಿಂದ ಸಾರ್ವಜನಿಕರು ತಮ್ಮ ಹತ್ತಿರದ ನಾಡ ಕಛೇರಿಗಳಲ್ಲಿಯೇ ಅಗತ್ಯ ಸೇವೆಗಳನ್ನು ಪಡೆಯಬಹುದಾಗಿರುತ್ತದೆ. ಇದರಿಂದ ಸಾರ್ವಜನಿಕರ ಸಮಯದ ಉಳಿತಾಯ ಹಾಗೂ ಪ್ರಯಾಣದ ವೆಚ್ಚವನ್ನು ಕಡಿಮೆಗೊಳಿಸಬಹುದಾಗಿರುತ್ತದೆ.

ಈಗ ಜಾರಿಯಾಗಿರುವ ಕರ್ನಾಟಕ ನಾಗರೀಕರಿಗೆ ಸೇವೆಗಳ ಖಾತರಿ ಅಧಿನಿಯಮದಂತೆ ಸಾರ್ವಜನಿಕರಿಗೆ ನಿಗದಿತ ಕಾಲದಲ್ಲಿ ಸೇವೆಯನ್ನು ನೀಡುವುದು ಅವಶ್ಯಕವಾಗಿರುತ್ತದೆ. ಅದರಂತೆ ಕಂದಾಯ ಇಲಾಖೆಯಲ್ಲಿ ನೀಡುವ ಜಾತಿ ಆದಾಯ ಪ್ರಮಾಣ ಪತ್ರ, ಜನನ ಪ್ರಮಾಣ ಪತ್ರ, ಮರಣ ಪ್ರಮಾಣ ಪತ್ರ ಇತ್ಯಾದಿಗಳನ್ನು ನೀಡಲು ಕನಿಷ್ಠ 7 ದಿನಗಳಿಂದ 21 ದಿನಗಳ ಗರಿಷ್ಠ ಅವಧಿಯನ್ನು ನಿಗದಿಪಡಿಸಲಾಗಿರುತ್ತದೆ.

ಸಾರ್ವಜನಿಕರಿಗೆ ಅನುಕೂಲವಾಗುವ ನಿಟ್ಟಿನಲ್ಲಿ, ಸಾರ್ವಜನಿಕರಿಗೆ ಅಗತ್ಯವಾದ ಇತರೇ ಅಧಿಕಾರಗಳನ್ನು ನಾಡಕಛೇರಿ ಉಪ ತಹಶೀಲ್ದಾರರಿಗೆ ಪ್ರತ್ಯಾಯೋಜಿಸಲು ಸರ್ಕಾರ ನಿರ್ಧರಿಸುವ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 62 ಬಿಎಮ್‌ಎಮ್ 2011, ಬೆಂಗಳೂರು, ದಿನಾಂಕ: 18/02/2012**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಿಂದ (5)ರ ಸರ್ಕಾರಿ ಆದೇಶಗಳಂತೆ ಈಗಾಗಲೇ ಅಸ್ತಿತ್ವದಲ್ಲಿರುವ 329 ನಾಡ ಕಛೇರಿಗಳ ಉಪ ತಹಶೀಲ್ದಾರರಿಗೆ ಪ್ರತ್ಯಾಯೋಜಿಸಿರುವ ಎಲ್ಲಾ ಅಧಿಕಾರಗಳನ್ನು ತಕ್ಷಣವೇ ಹಿಂತೆಗೆದುಕೊಳ್ಳಲಾಗಿದೆ.

ಈ ಕೆಳಗೆ ವಿವರಿಸಿರುವಂತಹ ಎಲ್ಲಾ ಪ್ರಮಾಣ ಪತ್ರ, ದೃಢೀಕರಣ ಪತ್ರ ಹಾಗು ಎಲ್ಲಾ ಇತರೇ ಅಧಿಕಾರಗಳನ್ನು ಪ್ರತ್ಯಾಯೋಜಿಸಿ ತಕ್ಷಣವೇ ಜಾರಿಗೆ ಬರುವಂತೆ ಈ ಮೂಲಕ ಆದೇಶಿಸಲಾಗಿದೆ.

1. ಆದಾಯ ಪ್ರಮಾಣ ಪತ್ರ – ವಿದ್ಯಾಭ್ಯಾಸದ ಉದ್ದೇಶಕ್ಕಾಗಿ ಮಾತ್ರ
2. ವಾಸಸ್ಥಳ ಪ್ರಮಾಣ ಪತ್ರ
3. ಮೃತರ ಕುಟುಂಬ ಸದಸ್ಯರ ದೃಢೀಕರಣ ಪ್ರಮಾಣ ಪತ್ರ
4. ಗೇಣಿರಹಿತ ದೃಢೀಕರಣ ಪ್ರಮಾಣ ಪತ್ರ

5. ಭೂಹಿಡುವಳಿ ಪ್ರಮಾಣ ಪತ್ರ
6. ಮರಣ ಪ್ರಮಾಣ ಪತ್ರ (ಈಗಾಗಲೇ ನೀಡಿರುವ)
7. ಕೃಷಿ ಕಾರ್ಮಿಕ ಪ್ರಮಾಣ ಪತ್ರ
8. ವೃದ್ಧಾಪ್ಯ ವೇತನ ಮಂಜೂರಾತಿ
9. ವಿಧವಾ ವೇತನ ಮಂಜೂರಾತಿ
10. ಅಂಗವಿಕಲರಿಗೆ ಭತ್ಯೆ ಮಂಜೂರಾತಿ
11. ಸಂಧ್ಯಾ ಸುರಕ್ಷಾ ಯೋಜನೆ
12. ಸರ್ಕಾರಿ ಬಾಕಿ ವಸೂಲಾತಿ ಮತ್ತು ಜಮ ಹಾಗೂ ಡಿಸಿಬಿ ಲೆಕ್ಕಗಳ ನಿರ್ವಹಣೆ
13. ದರಖಾಸ್ತು ರೆಕಾರ್ಡ್‌ಗಳ ತಯಾರಿಕೆ
14. ಪ್ರವಾಹ ಮತ್ತು ಬೆಂಕಿ ಅಪಘಾತಗಳಲ್ಲಿ ನೊಂದವರಿಗೆ ಪರಿಹಾರ ಧನ ನೀಡುವಿಕೆ
15. ಎಲಾ ವಿಧವಾದ ದೃಢೀಕರಣ ಪತ್ರ (All types of certified copies)
16. ಅಧಿಕೃತ ವ್ಯವಸಾಯಗಾರರಿಗೆ ದೃಢೀಕರಣ ಪತ್ರ ನೀಡುವಿಕೆ
17. ಮುಜರಾಯಿ ಸಂಸ್ಥೆಗಳ ನಿರ್ವಹಣೆ ಮತ್ತು ತನಿಖೆ
18. ಗ್ರಾಮಲೆಕ್ಕಿಗರ ಮತ್ತು ಕಂದಾಯ ನಿರೀಕ್ಷಕರುಗಳ ತನಿಖೆ
19. ಪಡಿತರ ಕಾರ್ಡುಗಳ ನೀಡಿಕೆ
20. ಸಣ್ಣ, ಅತಿಸಣ್ಣ ರೈತರಿಗೆ ಧೃಢೀಕೃತ ಪತ್ರ ನೀಡುವಿಕೆ
21. ಸ್ವಾಧೀನ ಪ್ರಕರಣಗಳ ಕಡತಗಳ ತಯಾರಿಕೆ
22. ಗ್ರಾಮಲೆಕ್ಕಿಗರ ಕೈಪುಸ್ತಕದ ಪುಟ 3(15) ರೀತ್ಯ ಗ್ರಾಮದ ಅಂಕಿ ಅಂಶಗಳನ್ನು ನಾಡ ಕಛೇರಿಯಲ್ಲಿ ನಿರ್ವಹಿಸುವ ಬಗ್ಗೆ.
23. ಜನನ ಮತ್ತು ಮರಣ ದಾಖಲೆಗಳ ನಿರ್ವಹಣೆ
24. ಪ್ರತಿವರ್ಷ 10 ಪ್ರತಿಶತ ಹಳ್ಳಿಗಳಲ್ಲಿ 2 ಮುಖ್ಯ ಬೆಳೆ ಕಟಾವು ಪ್ರಯೋಗಗಳನ್ನು ಮಾಡುವುದು
25. ಗ್ರಾಮಲೆಕ್ಕಿಗರು ಮತ್ತು ಸ್ವಾಧೀನದಲ್ಲಿರುವ ಮತ್ತಿತರರಿಗೆ ಸಾಂದರ್ಭಿಕ ರಜೆ
26. ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 94, 104, 127, 129 ಮತ್ತು 164ರಡಿ ಕ್ರಮ ತೆಗೆದುಕೊಳ್ಳುವ ಅಧಿಕಾರ.
27. ಮೇಲುಸ್ತರಕ್ಕೆ ಸೇರಿಲ್ಲವೆಂದು ದೃಢೀಕರಣ ಪತ್ರ
28. ವ್ಯವಸಾಯಗಾರರ ಕುಟುಂಬದ ದೃಢೀಕರಣ ಪತ್ರ
29. ಬೊನ್ ಫೈಡ್ ದೃಢೀಕರಣ ಪತ್ರ
30. ಜನನ ಪ್ರಮಾಣ ಪತ್ರ (ಈಗಾಗಲೇ ನೀಡಿರುವ)
31. ಜಮೀನು ಇಲ್ಲದಿರುವ ಬಗ್ಗೆ ದೃಢೀಕರಣ ಪತ್ರ
32. ಸರ್ಕಾರಿ ನೌಕರಿ ಇಲ್ಲದಿರುವ ಬಗ್ಗೆ ಪ್ರಮಾಣ ಪತ್ರ
33. ನಿರುದ್ಯೋಗಿ ದೃಢೀಕರಣ ಪತ್ರ
34. ಮರುವಿವಾಹವಾಗದಿರುವ ಬಗ್ಗೆ ದೃಢೀಕರಣ ಪತ್ರ
35. ಜೀವಂತ ದೃಢೀಕರಣ ಪತ್ರ
36. ವಿಧವೆ ದೃಢೀಕರಣ ಪತ್ರ
37. ಸಾಲ ತೀರಿಸುವ ಶಕ್ತಿ ಪ್ರಮಾಣ ಪತ್ರ
38. ಜನಸಂಖ್ಯಾ ಪ್ರಮಾಣ ಪತ್ರ
39. ನಾಗರೀಕ ನೋಂದಣಿ
40. ಪಹಣಿ ಪತ್ರಿಕೆ
41. ಮ್ಯುಟೇಶನ್ ಎಕ್ಸಟ್ರ್ಯಾಕ್ಟ್ (Mutation Extract)
42. ಪ್ರತಿ ನಾಡಕಛೇರಿಯಲ್ಲಿ ಭೂಮಿ ಕಿಯೋಕ್ಸ್‌ಗಳನ್ನು ಪ್ರಾರಂಭಿಸಿ ಅವುಗಳಿಗೆ ಸಂಬಂಧಿಸಿದ ಮೇಲ್ವಿಚಾರಣೆ ಹಾಗೂ ನಿರ್ವಹಣೆಗಳ ಅಧಿಕಾರ.
43. ಪ್ರತಿ ನಾಡ ಕಚೇರಿಯಲ್ಲಿ ನೆಮ್ಮದಿ ಕೇಂದ್ರಗಳನ್ನು ಪ್ರಾರಂಭಿಸಿ ಅವುಗಳಿಗೆ ಸಂಬಂಧಿಸಿದ ಮೇಲ್ವಿಚಾರಣೆ ಹಾಗೂ ನಿರ್ವಹಣೆಗಳ ಅಧಿಕಾರ
44. ಪ್ರಕೃತಿ ವಿಕೋಪಗಳ ಮುನ್ಸೂಚನೆ, ಬರ ಪರಿಸ್ಥಿತಿ ನಿರ್ವಹಣೆ ಹಾಗೂ ಮಳೆ ಮಾಪನದ ನಿರ್ವಹಣೆ ಇತ್ಯಾದಿ ಸಂಬಂಧಪಟ್ಟ ಕೆಲಸಗಳು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 615

**ಅಶೋಕ ಕುಮಾರ್ ಚ. ಮನೋಳಿ**

ಸರ್ಕಾರದ ಪ್ರಧಾನ ಕಾರ್ಯದರ್ಶಿ,

ಕಂದಾಯ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕು ಡಣಾಪುರ ಗ್ರಾಮದ ವಿವಿಧ ಸರ್ವೆ ನಂಬರುಗಳಲ್ಲಿನ 103.74ಎಕರೆ ಸರ್ಕಾರಿ ಜಮೀನನ್ನು ಕೆಐಎಡಿಬಿ ರವರ ಮೂಲಕ ಬಿ.ಎಂ.ಎಂ. ಇಸ್ಪಾತ್ ಕಂಪನಿ ನಿಯಮಿತ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಜಮೀನನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ ಬಳ್ಳಾರಿ ರವರ ಪತ್ರ ಸಂಖ್ಯೆ:ಕಂ.ಭೂಮಿ/107/ 2007-08, ದಿನಾಂಕ: 8-5-2009, 7-9-2009, 6-1-2010, 24-05-2010 ಹಾಗೂ ದಿ: 13-12-2011.

2. ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ ಮತ್ತು ಪದನಿಮಿತ್ತ ವ್ಯವಸ್ಥಾಪಕ ನಿರ್ದೇಶಕರ ಹಾಗೂ ಸದಸ್ಯ ಕಾರ್ಯದರ್ಶಿ, ಸರ್ಕಾರಿ ಜಮೀನು ಸಂರಕ್ಷಣಾ ಕಾರ್ಯಪಡೆ, ಬೆಂಗಳೂರು ರವರ ಪತ್ರ ಸಂಖ್ಯೆ:ಕೆಪಿಎಲ್‌ಸಿ/ಎಲ್‌ಎನ್‌ಡಿ/179/ 2010-11, ದಿನಾಂಕ: 04/08/2010.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು ಬಳ್ಳಾರಿ ಜಿಲ್ಲೆ, ಬಳ್ಳಾರಿ ರವರು ಮೇಲೆ ಓದಲಾದ (1)ರ ಪತ್ರಗಳಲ್ಲಿ ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕು, ಡಣಾಪುರ ಗ್ರಾಮದ ವಿವಿಧ ಸರ್ವೆ ನಂಬರುಗಳ ಒಟ್ಟು ವಿಸ್ತೀರ್ಣ 103ಎಕರೆ 74ಸೆಂಟ್ಸ್ ಸರ್ಕಾರಿ ಜಮೀನನ್ನು ಕೆ.ಐ.ಎ.ಡಿ.ಬಿ ರವರ ಮೂಲಕ ಬಿ.ಎಂ.ಎಂ. ಇಸ್ಪಾತ್ ಕಂಪನಿ ನಿಯಮಿತ ಇವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರು ಮಾಡುವ ಸಂಬಂಧ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

2) ಬಿ.ಎಂ.ಎಂ. ಇಸ್ಪಾತ್ ಸಂಸ್ಥೆಯವರಿಗೆ ಕೈಗಾರಿಕಾ ಉದ್ದೇಶಕ್ಕಾಗಿ ಮಂಜೂರಾತಿಗಾಗಿ ಪ್ರಸ್ತಾಪಿಸಿರುವ ಸರ್ಕಾರಿ ಜಮೀನುಗಳು ಈ ಕೆಳಕಂಡಂತೆ ವರ್ಗೀಕೃತಗೊಂಡಿರುತ್ತದೆ.

| ಕ್ರಮ ಸಂಖ್ಯೆ | ಗ್ರಾಮದ ಹೆಸರು | ಸ.ನಂ. | ಒಟ್ಟು ವಿಸ್ತೀರ್ಣ | ಮಂಜೂರಾತಿಗೆ ಕೋರಿರುವ ವಿಸ್ತೀರ್ಣ | ಷರಾ |
|---|---|---|---|---|---|
| 1. | ಡಣಾಪುರ | 11ಸಿ/1 | 0.99 | 0.99 | ಸರ್ಕಾರಿ ಅನಾಧೀನ |
| 2. | ಡಣಾಪುರ | 11ಸಿ/2 | 1.95 | 1.95 | ಸರ್ಕಾರಿ ಅನಾಧೀನ |
| 3. | ಡಣಾಪುರ | 12ಡಿ | 0.15 | 0.15 | ಸರ್ಕಾರಿ ಅನಾಧೀನ |
| 4. | ಡಣಾಪುರ | 16ಎ/1ಎ | 3.62 | 3.62 | ಸರ್ಕಾರಿ ಬಂಡೆ |
| 5. | ಡಣಾಪುರ | 16ಎ/1ಸಿ | 2.32 | 2.32 | ಸರ್ಕಾರಿ ಅನಾಧೀನ |
| 6. | ಡಣಾಪುರ | 16ಎ1/1ಇ | 24.36 | 12.00 | ಸರ್ಕಾರಿ ಬಂಡೆ |
| 7. | ಡಣಾಪುರ | 17ಬಿ(ಪಿ) | 6.81 | 4.51 | ಸರ್ಕಾರಿ ಅನಾಧೀನ |
| 8. | ಡಣಾಪುರ | 23ಎ | 0.47 | 0.47 | ಸರ್ಕಾರಿ ಅನಾಧೀನ |
| 9. | ಡಣಾಪುರ | 24ಸಿ/2 | 0.51 | 0.51 | ಸರ್ಕಾರಿ ಅನಾಧೀನ |
| 10. | ಡಣಾಪುರ | 24ಸಿ/3 | 1.96 | 1.96 | ಸರ್ಕಾರಿ ಅನಾಧೀನ |
| 11. | ಡಣಾಪುರ | 25ಸಿ/1 | 1.03 | 1.03 | ಸರ್ಕಾರಿ ಅನಾಧೀನ |
| 12. | ಡಣಾಪುರ | 28ಸಿ | 0.82 | 0.82 | ಸರ್ಕಾರಿ ಹಳ್ಳ |
| 13. | ಡಣಾಪುರ | 28ಡಿ | 0.40 | 0.40 | ಸರ್ಕಾರಿ ಅನಾಧೀನ |
| 14. | ಡಣಾಪುರ | 28ಜಿ | 3.77 | 3.77 | ಸರ್ಕಾರಿ ಅನಾಧೀನ |
| 15. | ಡಣಾಪುರ | 29ಸಿ | 4.56 | 4.56 | ಸರ್ಕಾರಿ ಅನಾಧೀನ |
| 16. | ಡಣಾಪುರ | 29ಹೆಚ್ | 8.52 | 8.52 | ಸರ್ಕಾರಿ ಹಳ್ಳ ಅನಾಧೀನ |
| 17. | ಡಣಾಪುರ | 29ಐ | 1.20 | 1.20 | ಸರ್ಕಾರಿ ಅನಾಧೀನ |
| 18. | ಡಣಾಪುರ | 29ಜೆ | 0.25 | 0.25 | ಸರ್ಕಾರಿ ಅನಾಧೀನ |
| 19. | ಡಣಾಪುರ | 29ಕೆ | 1.79 | 1.79 | ಸರ್ಕಾರಿ ಅನಾಧೀನ |
| 20. | ಡಣಾಪುರ | 34 | 1.87 | 1.87 | ಸರ್ಕಾರಿ ಕಲ್ಲುಗುಡ್ಡ |
| 21. | ಡಣಾಪುರ | 35ಬಿ4 | 0.16 | 0.16 | ಸರ್ಕಾರಿ ಅನಾಧೀನ |
| 22. | ಡಣಾಪುರ | 44ಎ1 | 0.21 | 0.21 | ಸರ್ಕಾರಿ ಅನಾಧೀನ |
| 23. | ಡಣಾಪುರ | 44ಎ/2 | 0.30 | 0.30 | ಸರ್ಕಾರಿ ಅನಾಧೀನ |
| 24. | ಡಣಾಪುರ | 44ಎ/4 | 0.26 | 0.26 | ಸರ್ಕಾರಿ ಅನಾಧೀನ |
| 25. | ಡಣಾಪುರ | 44ಬಿ4 | 2.07 | 2.07 | ಸರ್ಕಾರಿ ಅನಾಧೀನ |
| 26. | ಡಣಾಪುರ | 46/2 | 0.45 | 0.45 | ಸರ್ಕಾರಿ ಅನಾಧೀನ |
| 27. | ಡಣಾಪುರ | 47ಬಿ(ಪಿ) | 5.13 | 5.13 | ಸರ್ಕಾರಿ ಅನಾಧೀನ |
| 28. | ಡಣಾಪುರ | 48ಎ/20 | 2.25 | 2.25 | ಸರ್ಕಾರಿ ಅನಾಧೀನ |
| 29. | ಡಣಾಪುರ | 48ಎ/21 | 0.22 | 0.22 | ಸರ್ಕಾರಿ ಅನಾಧೀನ |
| 30. | ಡಣಾಪುರ | 48ಎ/24 | 7.65 | 2.00 | ಸರ್ಕಾರಿ ಅನಾಧೀನ |
| 31. | ಡಣಾಪುರ | 48ಎ/32 | 0.85 | 0.85 | ಸರ್ಕಾರಿ ಅನಾಧೀನ |
| 32. | ಡಣಾಪುರ | 48ಎ/39 | 0.56 | 0.56 | ಸರ್ಕಾರಿ ಅನಾಧೀನ |
| 33. | ಡಣಾಪುರ | 48ಸಿ/2 | 0.25 | 0.25 | ಸರ್ಕಾರಿ ಹಳ್ಳ |

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಸಚಿವಾಲಯ

**ವಿಷಯ :** 2011-12ನೇ ಸಾಲಿಗೆ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ಸಹಾಯಾನುಧಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಲಾ 57 ಎಲ್ಎಎಂ 2011 ದಿನಾಂಕ: 07-04-2011.
2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 209 ಬಿಆರ್‌ಎಸ್ 2011, ದಿನಾಂಕ: 04-02-2012. ಆರ್ಥಿಕ ಇಲಾಖೆಯಿಂದ
3. ಸರ್ಕಾರಿ ಆದೇಶ ಸಂಖ್ಯೆ: ಲಾ 12 ಎಲ್ಎಡಿ 2011, ದಿನಾಂಕ: 02-05-2011, 06-07-2011 ಮತ್ತು 29-10-2011
4. ಪತ್ರ ಸಂಖ್ಯೆ: 11/ಕಾಸಂಸು/ಎ-2/803, ದಿನಾಂಕ: 30-12-2011 ನಿರ್ದೇಶಕರು, ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆರವರಿಂದ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 07-04-2011ರ ಆದೇಶದಲ್ಲಿ ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಕ್ರಿಯಾ ಯೋಜನೆಗಳನ್ನು 2011-12 ಸಾಲಿನಲ್ಲಿ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ. 2011-12ನೇ ಸಾಲಿನಲ್ಲಿ ಕರ್ನಾಟಕ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಂಸ್ಥೆಗೆ 2014-00-800-5-03-059ರ (ಯೋಜನೆ) ಲೆಕ್ಕ ಶೀರ್ಷಿಕೆಯಡಿಯಲ್ಲಿ ರೂ.45.00 ಲಕ್ಷಗಳ ಆಯವ್ಯಯ ಅವಕಾಶವನ್ನು ಕಲ್ಪಿಸಲಾಗಿದೆ, ಮತ್ತು ಮೇಲೆ (2)ರಲ್ಲಿ ಓದಲಾದ ದಿನಾಂಕ: 04-02-2012ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ಸ್ಥಳಾವಕಾಶಕ್ಕೆ ಒದಗಿಸಿಕೊಳ್ಳುವ ವೆಚ್ಚಗಳಿಗೆ (To meet the expenditure towards infrastructure of the office of Karnataka Institute of Law and Parliamentrary Reforms) ಹೆಚ್ಚುವರಿ ಅನುದಾನವಾಗಿ ರೂ.31.00 ಲಕ್ಷಗಳನ್ನು ಒದಗಿಸಲಾಗಿದೆ. ಉಲ್ಲೇಖಿತ (3)ರಲ್ಲಿ ಓದಲಾದ ದಿನಾಂಕ: 02-05-2011, 06-07-2011 ಮತ್ತು 29-10-2011ರ ಆದೇಶಗಳಲ್ಲಿ ಕ್ರಮವಾಗಿ ಒಂದು ಎರಡು ಮತ್ತು ಮೂರನೇ ಕಂತಾಗಿ ತಲಾ ರೂ.11.25 ಲಕ್ಷಗಳಂತೆ ಒಟ್ಟು ರೂ.33.75 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಪ್ರಸ್ತುತ ನಿರ್ದೇಶಕರು ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆ ಇವರು ಮೇಲೆ (4)ರಲ್ಲಿ ಓದಲಾದ ದಿನಾಂಕ: 30-12-2011ರ ಪತ್ರದಲ್ಲಿ ಸಂಸ್ಥೆಗೆ ಸ್ಥಳಾವಕಾಶಕ್ಕೆ ಒದಗಿಸಿಕೊಳ್ಳುವ ವೆಚ್ಚಗಳಿಗಾಗಿ ತುರ್ತಾಗಿ ರೂ.55.00 ಲಕ್ಷಗಳ ನಾಲ್ಕನೇ ಕಂತಿನ ಹಣ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 12 ಎಲ್ಎಡಿ 2011, ಬೆಂಗಳೂರು, ದಿನಾಂಕ: 16-02-2012**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, 2011-12ನೇ ಸಾಲಿಗೆ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ಸ್ಥಳಾವಕಾಶಕ್ಕೆ ಒದಗಿಸಿಕೊಳ್ಳುವ ವೆಚ್ಚಗಳಿಗಾಗಿ ಮತ್ತು ಇತರೆ ವೆಚ್ಚಗಳ ನಿರ್ವಹಣೆಗಳಿಗೆ ನಾಲ್ಕನೇ ಕಂತಾಗಿ ರೂ. 31.00 ಲಕ್ಷಗಳು (ರೂಪಾಯಿ ಮೂವತ್ತೊಂದು ಲಕ್ಷಗಳು ಮಾತ್ರ) ಸಹಾಯಾನುದಾನವನ್ನು ಈ ಕೆಳಕಂಡ ಷರತ್ತಿನೊಂದಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಸಂಸ್ಥೆಗೆ ನಿಗದಿಗೊಳಿಸಿರುವ ಕ್ರಿಯಾ ಯೋಜನಾ ಕಾರ್ಯಕ್ರಮಗಳಿಗೆ ಮಾತ್ರ ಬಳಸತಕ್ಕದ್ದು.
2. ಆರ್ಥಿಕ ಇಲಾಖೆ ಆಗಿಂದಾಗ್ಗೆ ಹೊರಡಿಸಿರುವ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
3. ಬಿಡುಗಡೆ ಮಾಡಿರುವ ಹಣಕ್ಕೆ ನಿಗದಿತ ನಮೂನೆಯಲ್ಲಿ ಬಳಕೆ ಪ್ರಮಾಣ ಪತ್ರ ಒದಗಿಸುವುದು.

ಆ ರೀತಿ ಬಿಡುಗಡೆ ಮಾಡುವ ಮೊತ್ತವನ್ನು ಲೆಕ್ಕ ಶೀರ್ಷಿಕೆ "2014-00-800-5-03 ನ್ಯಾಯಾಂಗ-ಇತರೆ ಪೂರ್ವಭಾವಿ ಸೌಕರ್ಯಗಳು – 059 ಸಹಾಯಾನುಧಾನ (ಯೋಜನೆ)" ಇದರಡಿಯಲ್ಲಿ ಭರಿಸುವುದು. ಇದನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ನಿಯಮಾನುಸಾರ ಬಳಸತಕ್ಕದ್ದು.

ಇದಕ್ಕೆ ಆರ್ಥಿಕ ಇಲಾಖೆಯವರ ಟಿಪ್ಪಣಿ ಸಂಖ್ಯೆ: ಆಇ 32 ವೆಚ್ಚ 10/2012 ದಿನಾಂಕ: 06-02-2012ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ರುಕ್ಮಿಣಿ ದಿವಾಕರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

ಪಿ.ಆರ್. 647

## ವಸತಿ ಸಚಿವಾಲಯ

**ವಿಷಯ :** ರಾಯಚೂರು ಜಿಲ್ಲೆ ರಾಯಚೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನಾಮನಿರ್ದೇಶಿಸುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ. ವಇ 42 ಹೆಚ್ಎಎಂ 1999 ದಿನಾಂಕ: 10-05-2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪಟ್ಟಣ ಹಾಗೂ ಗ್ರಾಮೀಣ ಪ್ರದೇಶಗಳಿಗೆ ಪ್ರತ್ಯೇಕ ಆಶ್ರಯ ಸಮಿತಿಗಳನ್ನು ಪುನರ್ ರಚಿಸಿ, ಸಮಿತಿಯ ಸದಸ್ಯರ ಅಧಿಕಾರ ಮತ್ತು ಕರ್ತವ್ಯಗಳನ್ನು ನಿಗದಿಪಡಿಸಿ ಆದೇಶವನ್ನು ಹೊರಡಿಸಿದೆ. ಈ ಪರಿಷ್ಕೃತ ಆದೇಶದನ್ವಯ ರಾಯಚೂರು ಜಿಲ್ಲೆ ರಾಯಚೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 20 ಹೆಚ್‌ಎಎಸ್ 2012, ಬೆಂಗಳೂರು, ದಿನಾಂಕ: 13–14ನೇ ಫೆಬ್ರವರಿ 2012**

ರಾಯಚೂರು ಜಿಲ್ಲೆ ರಾಯಚೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿ ಆದೇಶಿಸಿದೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1. | ಶ್ರೀ ಎಲೆ ಗೋವಿಂದ, ಕೋಟೆ, ಗಣೇಶ ಕಟ್ಟೆ, ರಾಯಚೂರು. | ಸಾಮಾನ್ಯ |
| 2. | ಶ್ರೀ ತಾಯಪ್ಪ ಅರಕೇರ ಹರಿಜನವಾಡ, ರಾಯಚೂರು. | ಎಸ್.ಸಿ. |
| 3. | ಶ್ರೀ ಸೆಂಟ್ರಿಂಗ ಶಾಲಂ, ಮ್ಯಾದರವಾಡಿ, ರಾಯಚೂರು. | ಅ.ಸಂ. |
| 4. | ಶ್ರೀಮತಿ ಡಿ. ಕುಸುಮಾ ಕೋಂ. ಗೋಪಿ, ಎಲ್.ಬಿ.ಎಸ್. ನಗರ, ರಾಯಚೂರು. | ಹಿಂ. ವರ್ಗ (ಮಹಿಳೆ) |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ಶಂಕರಪ್ಪ**

ಪಿ.ಆರ್. 648 ಪೀಠಾಧಿಕಾರಿ–2, ವಸತಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಇವರು ಅಧಿಕ ಪ್ರಭಾರ ನಗರ ಯೋಜನಾ ಸದಸ್ಯರು, ಗದಗ–ಬೆಟಗೇರಿ ನಗರಾಭಿವೃದ್ಧಿ ಪ್ರಾಧಿಕಾರ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ದಾಖಲಾಗಿರುವ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದಲ್ಲಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಸರ್ಕಾರದ ಮಂಜೂರಾತಿ ಕುರಿತು.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎಲ್–146/ಸಿಆರ್–6/2011/ಗದಗ, ದಿನಾಂಕ: 29/12/2011.
2. ತನಿಖಾಧಿಕಾರಿಯ ಅಂತಿಮ ವರದಿ ದಿನಾಂಕ: 15–11–2011.
3. ತನಿಖಾ ದಾಖಲೆಗಳಾದ ಮೆಮೋ ಆಫ್ ಎವಿಡೆನ್ಸ್ ಮತ್ತು ವಿವರ ಪ್ರಥಮ ವರ್ತಮಾನ ವರದಿ, ಫಿರ್ಯಾದಿಯ ಪ್ರತಿ ವಹಿಸುವಿಕೆ, ಪಂಚನಾಮೆ ಮತ್ತು ಸಂಬಂಧಿಸಿದ ಕಾಗದ ಪತ್ರಗಳ ಪ್ರತಿ, ಜಪ್ತಿ ಪಂಚನಾಮೆಯ ಪ್ರತಿ, ಸಮಜಾಯಿಸಿ ಹೇಳಿಕೆಯ ಪ್ರತಿ ಪಂಚನಾಮೆಯ ಸಂದರ್ಭದ ಫೋಟೊಗಳ ಛಾಯಾ ಪ್ರತಿಗಳು, ಗುನ್ನೆ ಜಾಗೆಯ ಕಚ್ಚಾ ನಕ್ಷೆಯ ಪ್ರತಿ, ಮ್ಯಾಜಿಸ್ಟ್ರೇಟ್‌ರವರಿಗೆ ಕಳುಹಿಸಿದ ಸ್ವತ್ತಿನ ಪಟ್ಟಿ ಪ್ರತಿ, ಪಂಚರ ಕೋರಿಕೆ ಪತ್ರಗಳು, ಧ್ವನಿ ದೃಢೀಕರಣ ಪಂಚನಾಮೆಯ ಪ್ರತಿ, ಅಪಾದಿತರ ಸೇವಾ ವಿವರದ ಪ್ರತಿ, ತನಿಖೆಯ ಕಾಲಕ್ಕೆ ಉಪಯೋಗಿಸಿದ ಮೋಟಾರ ಸೈಕಲ್‌ಗಳ ನೋಂದಣಿ ಪತ್ರಗಳ ದೃಢೀಕೃತ ಪ್ರತಿ, ರಸಾಯನಿಕ ತಜ್ಞರ ಪರೀಕ್ಷಾ ವರದಿ, ಕೃತ್ಯ ನಡೆದ ಸ್ಥಳದ ನಕ್ಷೆ, ಸಾಕ್ಷಿದಾರರ ಹೇಳಿಕೆಗಳು, ತನಿಖಾ ಕಾಲದಲ್ಲಿ ಅಮಾನತ್ತು ಪಡಿಸಿಕೊಂಡ ದಾಖಲಾತಿಗಳು, ಠಾಣಾ ದಿನಚರಿ ಪ್ರತಿ.

**ಪ್ರಸ್ತಾವನೆ :**

ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಅಧಿಕ ಪ್ರಭಾರದಲ್ಲಿ ನಗರ ಯೋಜನಾ ಸದಸ್ಯರು, ಗದಗ–ಬೆಟಗೇರಿ ನಗರಾಭಿವೃದ್ಧಿ ಪ್ರಾಧಿಕಾರ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ಗುನ್ನೆ ಸಂಖ್ಯೆ: 6/2011, ದಿನಾಂಕ: 29–06–2011ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಲೋಕಾಯುಕ್ತ ಪೊಲೀಸ್ ಠಾಣೆ, ಗದಗ ಇವರು ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ತಮ್ಮ ಪತ್ರ ದಿನಾಂಕ: 29–12–2011ರಲ್ಲಿ ಕಳುಹಿಸಿಕೊಡುತ್ತಾ, ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ) ಕೊಪ್ಪಳ ಇವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳ ಪಡಿಸಲು ಭ್ರಷ್ಟಾಚಾರ ನಿರ್ಮೂಲನೆ ಕಾಯ್ದೆ 1988ರ ಕಲಂ 19 (1) (ಬಿ) ರನ್ವಯ ಸಕ್ಷಮ ಪ್ರಾಧಿಕಾರದ ಮಂಜೂರಾತಿಯನ್ನು ನೀಡಲು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾನಿರ್ದೇಶಕರು ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರದೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿ,

1. ಫಿರ್ಯಾದುದಾರರಾದ ಶ್ರೀ ನೀಲರಾಜ ತಂದೆ ದಿವಾಕರ ಶಿಗ್ಲಿ ಸಾ. ಬೆಟಗೇರಿ, 7ನೇ ನಂಬರ್ ಶಾಲೆ ಹತ್ತಿರ, ಶಿಗ್ಲಿ ಓಣಿ, ಬೆಟಗೇರಿ, ಗದಗ ಇವರ ಫಿರ್ಯಾದು ದಿನಾಂಕ:29–06–2011,
2. ಪ್ರಥಮ ವರ್ತಮಾನ ವರದಿ, ಕರ್ನಾಟಕ ಲೋಕಾಯುಕ್ತ ಗದಗ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 6/2011.
3. ಪ್ರಾಯೋಗಿಕ ಪಂಚನಾಮೆ ದಿನಾಂಕ: 29–06–2011.
4. ಟ್ರ್ಯಾಫ್ ಮಹಜರ್ ದಿನಾಂಕ: 29–06–2011.
5. ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಉಪ ವಿಭಾಗ ಗದಗ ಇವರು ತಯಾರಿಸಿರುವ ಕೃತ್ಯ ನಡೆದ ಸ್ಥಳ ನಕಾಶೆ ದಿನಾಂಕ:02–07–2011.
6. ರಸಾಯನಿಕ ಪರೀಕ್ಷಕರ ವರದಿ ಸಂಖ್ಯೆ: LYK/RACE/DWD/22/2011, ದಿನಾಂಕ: 24–10–2011.

7. ಸಾಕ್ಷಿಗಳ ಹೇಳಿಕೆಗಳು:–
   1) ಶ್ರೀ ಚನಗೌಡ ಶಂಕರಗೌಡ ಪಾಟೀಲ 31 ವರ್ಷಗಳು ಅಬಕಾರಿ ನಿರೀಕ್ಷಕರು, ಗದಗ ವಲಯ, ಗದಗ.
   2) ಶ್ರೀ ಶ್ರೀಕಾಂತ ತಂದೆ ಮಾನಪ್ಪ ಕರಡಿ, ಪ್ರಧಾನ ಗುರುಗಳು, ಹೆಚ್.ಪಿ.ಕೆ.ಬಿ.ಎಸ್. ಶಾಲೆ, ನಂ. 19, ಹಮಾಲರ ಕಾಲೋನಿ, ಗದಗ.
   3) ಶ್ರೀ ಅಶೋಕ ತಂದೆ ಚನ್ನಬಸಪ್ಪ ಬಬಲಿ, ಎಸ್.ಡಿ.ಎ. ನಗರಾಭಿವೃದ್ಧಿ ಪ್ರಾಧಿಕಾರ, ಗದಗ–ಬೆಟಗೇರಿ.
   4) ಶ್ರೀ ರಂಜಿತಕುಮಾರ್ ತಂದೆ ರಘು ಪೂಜಾರಿ, ಬೆರಳಚ್ಚುಗಾರ (ತಾತ್ಕಾಲಿಕ) ನಗರಾಭಿವೃದ್ಧಿ ಪ್ರಾಧಿಕಾರ, ಗದಗ–ಬೆಟಗೇರಿ.
   5) ಶ್ರೀ ಹೆಚ್.ವಿ. ರಾಮಣ್ಣ ತಂದೆ ಲೇಟ್ ವೆಂಕಟರಾವ್, ಸಹಾಯಕ ನಿರ್ದೇಶಕರು, ಹೆಚ್ಚುವರಿ ನಿರ್ದೇಶಕರ ಕಛೇರಿ ಧಾರವಾಡ ಪ್ರಭಾರ ಸಹಾಯಕ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ, ಗದಗ.
   6) ಶ್ರೀ ಎಸ್. ಶೇಖರಪ್ಪ ತಂದೆ ಬಸವಲಿಂಗಪ್ಪ, ಆಯುಕ್ತರು, ನಗರಸಭೆ, ಗದಗ–ಬೆಟಗೇರಿ.
   7) ಶ್ರೀ ಅಸ್ಕರ್ ಅಲಿ ತಂದೆ ಅಲಿಸಾಹೇಬ್ ಅಣ್ಣಿಗೇರಿ, ದ್ವಿ.ದ.ಸ. ನಗರಸಭೆ, ಗದಗ–ಬೆಟಗೇರಿ.
   8) ಶ್ರೀ ಚನ್ನಬಸವೇಶ ತಂದೆ ಗುರಪ್ಪ ಜಿನಗಾ, ಸಹಾಯಕ ಇಂಜಿನಿಯರ್–ii, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಉಪ ವಿಭಾಗ, ಗದಗ.
   9) ಶ್ರೀ ಎಮ್.ಎಮ್. ಶೇಖ್, ಸಿ.ಸಿ.ಬಿ. ಕೆ.ಎಲ್.ಎ. ಪಿ.ಎಸ್. ಗದಗ.
   10) ಶ್ರೀ ಎಸ್. ವಾಯ್. ದಿವಟರ್, ಸಿ.ಎಚ್.ಸಿ. ಕೆ.ಎಲ್.ಎ. ಪಿ.ಎಸ್. ಗದಗ.
   11) ಶ್ರಿ ಎನ್.ಎಂ. ಚೂರಿ, ಸಿ.ಎಚ್.ಸಿ. ಕೆ.ಎಲ್.ಎ. ಪಿ.ಎಸ್. ಗದಗ.
   12) ಶ್ರೀ ಪಿ.ಎಮ್. ಹಿರೇಮಠ, ಸಿ.ಎಚ್.ಸಿ. ಕೆ.ಎಲ್.ಎ. ಪಿ.ಎಸ್. ಗದಗ.
   13) ಶ್ರೀ ಟಿ.ಹೆಚ್. ಮಡ್ಡಿ, ಸಿ.ಪಿ.ಸಿ. ಕೆ.ಎಲ್.ಎ. ಪಿ.ಎಸ್. ಗದಗ.
   14) ಶ್ರಿ ಎಂ.ಎಂ. ಅಯ್ಯನಗೌಡ, ಸಿ.ಪಿ.ಸಿ. ಕೆ.ಎಲ್.ಎ. ಪಿ.ಎಸ್. ಗದಗ.
   15) ಶ್ರೀ ವಿ.ಬಿ. ಅರಿಷಣದ, ಎಪಿಸಿ, ಕೆ.ಎಲ್.ಎ. ಪಿ.ಎಸ್. ಗದಗ.
   16) ಶ್ರೀ ಜಿ.ಆರ್. ಮುಜಾವರ್, ಎಪಿಸಿ, ಕೆ.ಎಲ್.ಎ. ಪಿ.ಎಸ್. ಗದಗ.

ತನಿಖಾಧಿಕಾರಿಗಳಾದ ಶ್ರೀ ಎಮ್.ಎಸ್. ಕರಿಬಸವನಗೌಡ, ಪಿ.ಐ. ಕರ್ನಾಟಕ ಲೋಕಾಯುಕ್ತ, ಗದಗ ಇವರು ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಇವರು ಅಧಿಕ ಪ್ರಭಾರದಲ್ಲಿ ನಗರ ಯೋಜನಾ ಸದಸ್ಯರು, ಗದಗ–ಬೆಟಗೇರಿ ನಗರಾಭಿವೃದ್ಧಿ ಪ್ರಾಧಿಕಾರ, ಗದಗ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಗದಗ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 6/2011ರಲ್ಲಿ ಭ್ರಷ್ಟಾಚಾರ ಪ್ರತಿಬಂಧ ಕಾಯ್ದೆ 1988ರ ಕಲಂ 7, 13(1) (d) ಸಹ ವಾಚನ 13(2)ರಡಿಯಲ್ಲಿ ದಾಖಲಿಸಿ ಕೊಂಡಿರುತ್ತಾರೆ.

ಅಪಾದಿತರಾದ ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಅಧಿಕ ಪ್ರಭಾರದಲ್ಲಿ ನಗರ ಯೋಜನಾ ಸದಸ್ಯರು, ಗದಗ–ಬೆಟಗೇರಿ ನಗರಾಭಿವೃದ್ಧಿ ಪ್ರಾಧಿಕಾರ, ಗದಗ (ಹಾಲಿ ಅಮಾನತ್ತಿನಲ್ಲಿ) ಇವರು ಫಿರ್ಯಾದುದಾರರಾದ ಶ್ರೀ ನೀಲರಾಜ ಬಿನ್ ದಿವಾಕರ ಶಿಗ್ಲಿ, ನಂ. 7, ಶಾಲೆ ಹತ್ತಿರ, ಶಿಗ್ಲಿ ಓಣಿ, ಬೆಟಗೇರಿ ತಾಲ್ಲೂಕ್, ಗದಗ ಜಿಲ್ಲೆ ಇವರು ತಮ್ಮ ಅಣ್ಣ ಮತ್ತು ತಂಗಿ ಹೆಸರಿನಲ್ಲಿ ಬೆಟಗೇರಿಯ ಆಸ್ತಿ ಸಂ. 6022/ಬಿ ಯಲ್ಲಿ ಹಳೆ ಮನೆ ಇದ್ದು, ಸದರಿ ಮನೆಯನ್ನು ಕೆಡವಿ ಅದೇ ಜಾಗದಲ್ಲಿ ಹೊಸ ಮನೆ ಕಟ್ಟಲು ನಗರ ಸಭೆಗೆ ಅರ್ಜಿ ಕೊಟ್ಟಿರುತ್ತಾರೆಂದು ಸದರಿ ಅರ್ಜಿಯನ್ನು ನಗರಸಭೆಯವರು ಮುಂದಿನ ಕ್ರಮಕ್ಕಾಗಿ ನಗರಾಭಿವೃದ್ಧಿ ಪ್ರಾಧಿಕಾರ ಗದಗಕ್ಕೆ ಕಳುಹಿಸಿರುತ್ತಾರೆಂದು ಮನೆ ಕಟ್ಟಲು ಫಿರ್ಯಾದುದಾರರು ಬ್ಯಾಂಕ್ ಸಾಲ ಪಡೆಯಬೇಕಿದ್ದು, ಸಾಲ ತೆಗೆದುಕೊಳ್ಳಲು ಲೈಸೆನ್ಸ್ ಅವಶ್ಯಕತೆ ಇದ್ದುದರಿಂದ ಫಿರ್ಯಾದುದಾರರು ದಿನಾಂಕ: 29–06–2011ರಂದು ನಗರಾಭಿವೃದ್ಧಿ ಪ್ರಾಧಿಕಾರದ ಅಧಿಕಾರಿಯಾದ ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್ ಭೇಟಿ ಮಾಡಿ ಬ್ಯಾಂಕ್ ಸಾಲ ಪಡೆಯುವ ಉದ್ದೇಶ ತಿಳಿಸಿ ನಗರ ಸಭೆಗೆ ಎನ್‌ಓಸಿ ಕಳಿಸುವಂತೆ ಕೇಳಿದಾಗ ಅವರು ರೂ. 500/– ಖರ್ಚಾಗುತ್ತದೆ ತಮಗೆ ರೂ. 500/–ಗಳನ್ನು ಕೊಡು ಕ್ಲರ್ಕ್‌ಗೆ ರೂ. 100/– ಕೊಡು ಎಂದು ಕೇಳಿರುತ್ತಾರೆ. ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಯಾವುದೇ ಫೀ ಕಟ್ಟುವುದು ಇಲ್ಲದಿದ್ದರೂ ಸಹ ಲಂಚ ಕೇಳುತ್ತಿರುವ ಪ್ರಾಧಿಕಾರದ ಅಧಿಕಾರಿಯಾದ ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್ ವಿರುದ್ಧ ದೂರನ್ನು ಸಲ್ಲಿಸಿರುತ್ತಾರೆ. ಸದರಿಯವರು ತನ್ನ ಕಛೇರಿಯಲ್ಲಿ ದಿನಾಂಕ: 29–06–2011ರಂದು ನೆರಳು ಸಾಕ್ಷಿಯ ಸಮಕ್ಷಮ ಫಿರ್ಯಾದುದಾರರಿಂದ ಸದರಿ ಸರ್ಕಾರಿ ಕೆಲಸವನ್ನು ಮಾಡಲು ಲಂಚದ ಹಣವನ್ನು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯು ಕೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಫಿನಾಫ್ತಲೀನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದುದಾರ ಹಾಗೂ ಆಪಾದಿತ ಸಾರ್ವಜನಿಕ ಅಧಿಕಾರಿ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ.500.00 ಗಳನ್ನು ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಅಧಿಕ ಪ್ರಭಾರದಲ್ಲಿ ನಗರ ಯೋಜನಾ ಸದಸ್ಯರು, ಗದಗ–ಬೆಟಗೇರಿ ನಗರಾಭಿವೃದ್ಧಿ ಪ್ರಾಧಿಕಾರ, ಗದಗ (ಹಾಲಿ ಅಮಾನತ್ತಿನಲ್ಲಿ) ಇವರ ಶರ್ಟಿನ ಜೇಬಿನಿಂದ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಅಪಾಧಿತರು ಭ್ರಷ್ಟಚಾರ ಪ್ರತಿಬಂಧಕ ಕಾಯ್ದೆ 1988ರ ಕಲಂ 7, 13(1)ಲರ ಸಹವಾಚನ ಕಲಂ 13(2)ರ ರಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧ ಕಾಯ್ದೆ 1988ರ ಅನ್ವಯ ಕಲಂ 7, 13(1)ಡಿ ಸಹವಾಚನ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೊಳಪಡಿಸಲು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪಾದಿತನನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದಾಗಿರುತ್ತದೆ. ಆದ್ದರಿಂದ ಸದರಿಯವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ) ಮತ್ತು 10(3)ರ ಪ್ರಕಾರ ಅಪಾದಿತ ಸಾರ್ವಜನಿಕ ಅಧಿಕಾರಿ/ನೌಕರರಾದ ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ

ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ ಗದಗ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಕಲಂ 7 ಮತ್ತು 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 122 ನಯೋಸೇ 2011, ಬೆಂಗಳೂರು, ದಿನಾಂಕ: 21/02/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಆರೋಪಿಯಾದ ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಅಧಿಕ ಪ್ರಭಾರದಲ್ಲಿ ಗದಗ–ಬೆಟಗೇರಿ, ನಗರಾಭಿವೃದ್ಧಿ ಪ್ರಾಧಿಕಾರ, ಗದಗ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಹುದ್ದೆಯಿಂದ ತೆಗೆದುಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಮುದುಕಪ್ಪ ಅಂದಪ್ಪ ಪ್ರಭಣ್ಣವರ್, ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು (ಸ್ವತಂತ್ರ ಪ್ರಭಾರ), ನಗರ ಯೋಜನಾ ಸದಸ್ಯರು, ನಗರಾಭಿವೃದ್ಧಿ ಪ್ರಾಧಿಕಾರ, ಕೊಪ್ಪಳ ಅಧಿಕ ಪ್ರಭಾರದಲ್ಲಿ ಗದಗ–ಬೆಟಗೇರಿ ನಗರಾಭಿವೃದ್ಧಿ ಪ್ರಾಧಿಕಾರ, ಗದಗ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988ರ ಕಲಂ 7, 13(1)ಡಿ ಸಹವಾಚನ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಕರ್ನಾಟಕ ಸರ್ಕಾರದ (ಕಾರ್ಯ ಕಲಾಪಗಳ ನಿರ್ವಹಣೆ) ನಿಯಮಗಳು, 1977ರ ನಿಯಮ 18 ಮತ್ತು 19(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿಯ ಅಡಿಯಲ್ಲಿ ಈ ದಿನ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಮೇಶ್ ಬಾಬು**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 649 ನಗರಾಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ:ಮೂಅಇ 72 ರಾಅವಿ 2008, ಬೆಂಗಳೂರು, ದಿನಾಂಕ:17–02–2012**

ಸರ್ಕಾರಿ ಆದೇಶ ಸಂ: ಮೂಅಇ 72 ರಾಅವಿ 2008 ದಿ:31-01-2012ರ ಆದೇಶ ಭಾಗದ ಕ್ರಮ ಸಂ: 3ರಲ್ಲಿ "ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಇವರು ಪೇಯೀಸ್ ರಸೀದಿಯ ಮೂಲಕ ಸರ್ಕಾದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಮೇಲುರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು, ಇಲ್ಲಿ ತೆಗೆಯಲು ಅನುಮತಿಸಿದೆ". ಎಂಬುದರ ಬದಲಿಗೆ **" ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಇವರು ಜಿಲ್ಲಾ ಖಜಾನೆ ಗುಲ್ಬರ್ಗಾ, ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ, ಉಪ ನಿರ್ದೇಶಕರು, ಎನ್.ಎಂ.ಸಿ., ಬೆಂಗಳೂರು, ಇವರು ಈ ಮೊತ್ತವನ್ನು ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಖಾತೆಗೆ ಅಪ್ ಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತ ಪ್ರಮಾಣ ಪತ್ರವನ್ನು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸತಕ್ಕದ್ದು."** ಎಂದು ಓದಿಕೊಳ್ಳತಕ್ಕದ್ದು.

ಉಳಿದಂತೆ ಆದೇಶದಲ್ಲಿ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ.ಸಂಪತ್ ಕುಮಾರ್**

ಪಿ.ಆರ್.650 ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

ವಿಷಯ : ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

ಓದಲಾಗಿದೆ :
1) ಸರ್ಕಾರದ ಆದೇಶ ಸಂಖ್ಯೆ: ಮೂಅಇ 32 ರಾಅವಿ 2004, ದಿನಾಂಕ:20–03–2007
2) ಸರ್ಕಾರದ ಆದೇಶ ಸಂಖ್ಯೆ : ಮೂಅಇ 32 ರಾಅವಿ 2004, ದಿನಾಂಕ:07–05–2007
3) ಸರ್ಕಾರದ ಆದೇಶ ಸಂಖ್ಯೆ : ಮೂಅಇ 23 ರಾಅವಿ 2008, ದಿನಾಂಕ:23–05–2009
4) ಸರ್ಕಾರದ ಆದೇಶ ಸಂಖ್ಯೆ : ಮೂಅಇ 23 ರಾಅವಿ 2008, ದಿನಾಂಕ:27–11–2009, 26–03–2010 ಮತ್ತು 30–03–2010
5) ವಿಶೇಷ ಜಿಲ್ಲಾಧಿಕಾರಿಗಳು, ಕೆ.ಐ.ಎ.ಡಿ.ಬಿ. ಇವರ ದಿನಾಂಕ:08–09–2010ರ ಆದೇಶ ಸಂಖ್ಯೆ:ಕೆ.ಐ.ಎ.ಡಿ.ಬಿ./ಕೇಂ.ಕವಿಜೆ/1849–(2)10/88–2010–11.
6) ಸರ್ಕಾರದ ಆದೇಶ ಸಂಖ್ಯೆ : ಮೂಅಇ 23 ರಾಅವಿ 2008, ದಿನಾಂಕ:04–12–2010
7) ವಿಶೇಷ ಜಿಲ್ಲಾಧಿಕಾರಿಗಳು, ಕೆ.ಐ.ಎ.ಡಿ.ಬಿ. ಇವರ ಆದೇಶ ಸಂಖ್ಯೆ:ಕೆ.ಐ.ಎ.ಡಿ.ಬಿ./ಕೇಂ.ಕವಿಜೆ/1849–(2) 14646 ದಿನಾಂಕ:14–12–2010.
8) ಸರ್ಕಾರದ ಆದೇಶ ಸಂಖ್ಯೆ: ಮೂಅಇ 23 ರಾಅವಿ 2008, ದಿನಾಂಕ:22–03–2011ರ
9) ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ, ಧಾರವಾಡ, ಇವರ ಪತ್ರ ಸಂ: DC/PA/CR-94/2011-12, ದಿನಾಂಕ:24–11–2011

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ (AAI) ತಯಾರಿಸಿರುವ ಮಾಸ್ಟರ್ ಪ್ಲಾನ್ ಪ್ರಕಾರ ಹುಬ್ಬಳ್ಳಿ ವಿಮಾನ ನಿಲ್ದಾಣವನ್ನು ವಿಸ್ತರಿಸಿ ಅಭಿವೃದ್ಧಿಪಡಿಸಲು ಸುಮಾರು 650 ಎಕರೆ ಜಮೀನಿನ ಭೂಸ್ವಾಧೀನಕ್ಕೆ ತಗಲುವ ವೆಚ್ಚವನ್ನು ಭರಿಸಲು ಮಂಜೂರಾತಿ ನೀಡಲಾಗಿದೆ.

2. ಮೇಲೆ ಓದಲಾದ ಕ್ರಮ ಸಂಖ್ಯೆ: (2), (3), (4), (6) ಮತ್ತು (8)ರ ಆದೇಶಗಳಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿ ಹಾಗೂ ಈ ವಿಮಾನ ನಿಲ್ದಾಣದ ವಿಸ್ತರಣೆಗೆ ಅಗತ್ಯವಾದ ಭೂಸ್ವಾಧೀನಕ್ಕಾಗಿ ರೂ.210.00 ಕೋಟಿಗಳನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ, ಇವರಿಗೆ ಬಿಡುಗಡೆ ಮಾಡಲಾಗಿದೆ.

3. ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಭೂಪರಿಹಾರಧನ ಬಿಡುಗಡೆ ಆದೇಶದಲ್ಲಿ ವಿಮಾನ ನಿಲ್ದಾಣದ ವಿಸ್ತರಣೆಗಾಗಿ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕಿನ ಗೋಕುಲ ಮತ್ತು ಉಣಕಲ ಗ್ರಾಮಗಳಲ್ಲಿ ಭೂಸ್ವಾಧೀನಪಡಿಸಿರುವ 710.36 ಎಕರೆ ಜಮೀನಿಗೆ ಭೂಪರಿಹಾರ ಧನವನ್ನು ಬಿಡುಗಡೆ ಮಾಡಲಾಗಿದೆ.

4. ಮೇಲೆ ಓದಲಾದ ಕ್ರಮ ಸಂಖ್ಯೆ: (7)ರ ಕೆ.ಐ.ಎ.ಡಿ.ಬಿ. ಆದೇಶದಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಭೂಸ್ವಾಧೀನಕ್ಕಾಗಿ ಬಿಡುಗಡೆಗೆ ಬಾಕಿಯಿರುವ ಮೊತ್ತ ರೂ.27.45 ಕೋಟಿಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿ, ಧಾರವಾಡ ಜಿಲ್ಲೆ, ಧಾರವಾಡ, ಇವರಿಗೆ ಬಿಡುಗಡೆ ಮಾಡಲಾಗಿದೆ.

5. ಮೇಲೆ ಓದಲಾದ ಕ್ರಮ ಸಂ. (9)ರ ಪತ್ರ ದಿನಾಂಕ:24–11–2011ರಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಇವರು ಹುಬ್ಬಳ್ಳಿ ವಿಮಾನ ನಿಲ್ದಾಣದ 605 ಎಕರೆ ಜಮೀನಿನ ಭೂಸ್ವಾಧೀನಕ್ಕಾಗಿ ಅವಶ್ಯವಿರುವ ಬಾಕಿ ಪರಿಹಾರ ಧನ ರೂ.50.00 ಕೋಟಿಗಳನ್ನು ಬಿಡುಗಡೆ ಮಾಡಿದಲ್ಲಿ, ಈ ವಿಮಾನ ನಿಲ್ದಾಣದ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳ್ಳುತ್ತದೆಂದು ಕೋರಿ ಹಣ ಬಿಡುಗಡೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

6. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಹುಬ್ಬಳ್ಳಿ ವಿಮಾನ ನಿಲ್ದಾಣದ ಭೂಸ್ವಾಧೀನಕ್ಕಾಗಿ ಅಗತ್ಯ ಪರಿಹಾರವನ್ನು ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 23 ರಾಅವಿ 2008, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ.1000 ಲಕ್ಷಗಳನ್ನು (ರೂ. ಒಂದು ಸಾವಿರ ಲಕ್ಷಗಳು ಮಾತ್ರ) ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ, ಧಾರವಾಡ, ಇವರಿಗೆ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು 2011–12ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465–01–190–1–05–(SDP) 133 ರಡಿಯಲ್ಲಿ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಒದಗಿಸಿರುವ ಮೊತ್ತದಿಂದ ಭರಿಸತಕ್ಕದ್ದು.

3. ಈ ಮೊತ್ತವನ್ನು ಜಿಲ್ಲಾಧಿಕಾರಿಗಳು ಧಾರವಾಡ ಜಿಲ್ಲೆ, ಧಾರವಾಡ ಇವರು ಜಿಲ್ಲಾ ಖಜಾನೆ, ಧಾರವಾಡ, ಇಲ್ಲಿ ಡ್ರಾ ಮಾಡಲು ಅಧಿಕರಿಸಿದೆ. ಉಪ ನಿರ್ದೇಶಕರು, ಎನ್ ಎಂ ಸಿ, ಬೆಂಗಳೂರು, ಇವರು ಈ ಮೊತ್ತವನ್ನು ಧಾರವಾಡ ಜಿಲ್ಲಾಧಿಕಾರಿಗಳ ಖಾತೆಗೆ ಅಪ್ ಲೋಡ್ ಮಾಡುವುದು. ಈ ಹಣವನ್ನು ಯೋಜನೆಗೆ ವೆಚ್ಚ ಮಾಡಿ ಉಪಯೋಗಿತ ಪ್ರಮಾಣ ಪತ್ರವನ್ನು ಧಾರವಾಡ ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 118 ವೆಚ್ಚ–1/2012 ದಿನಾಂಕ 07–02–2012ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಪಿ.ಆರ್.651

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

ವಿಷಯ : ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ 2011–12ರ ಸಾಲಿನಲ್ಲಿ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಿದ ಬಾಬ್ತು, ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

ಓದಲಾಗಿದೆ :
1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2011, ದಿನಾಂಕ:18–08–2011.
2) ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರಿಗೆ ಬರೆದಿರುವ ಸರ್ಕಾರದ ಪತ್ರ ಸಂಖ್ಯೆ: ಮೂಅಇ 210 ಮೂಇವಿ 2011, ದಿನಾಂಕ:9–12–2011
3) ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರ ಸಾಲದ ವಿಕ್ರಯ ಪಟ್ಟಿ ಸಂಖ್ಯೆ: 362, 363, 364 ದಿನಾಂಕ 9–12–2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 18–8–2011ರ ಆದೇಶದಲ್ಲಿ 2011–12ನೇ ಸಾಲಿನ ಆರ್ಥಿಕ ವರ್ಷದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಲೇಖನ ಸಾಮಗ್ರಿಗಳ ಖರೀದಿಗಾಗಿ ರೂ.55,000/–ಗಳನ್ನು ಹಂಚಿಕೆ ಮಾಡಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ 9–12–2011ರ ಪತ್ರದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಅವಶ್ಯಕವಾಗಿ ಬೇಕಾಗಿರುವ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವಂತೆ ಕೋರಲಾಗಿದೆ.

3. ಮೇಲೆ (3)ರ ದಿನಾಂಕ 9–12–2011ರ ಪತ್ರದಲ್ಲಿ ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರ ಸಾಲದ ವಿಕ್ರಯ ಪಟ್ಟಿಗಳೊಂದಿಗೆ ಜನತಾ ಬಜಾರ್, ಬೆಂಗಳೂರು ಇದರ ವ್ಯವಸ್ಥಾಪಕರು ಲೇಖನ ಸಾಮಗ್ರಿಗಳನ್ನು ಒದಗಿಸಿದ್ದು, ಲೇಖನ ಸಾಮಗ್ರಿಗಳನ್ನು ಒದಗಿಸಿರುವುದಕ್ಕೆ ವ್ಯಾಟ್ 14% ಸೇರಿ ಮೊತ್ತ ಒಟ್ಟು ಬೆಲೆ ರೂ.54,609/– (ರೂಪಾಯಿ ಐವತ್ನಾಲ್ಕು ಸಾವಿರದ ಆರು ನೂರ ಒಂಬತ್ತು ಮಾತ್ರ) ಹಣ ಪಾವತಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 210 ಮೂಇವಿ (1) 2011, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವ್ಯವಸ್ಥಾಪಕರು ಜನತಾ ಬಜಾರ್, ಬೆಂಗಳೂರು ಇವರು ದಿನಾಂಕ 09–12–2011 ಸಾಲದ ವಿಕ್ರಯ ಪಟ್ಟಿಗಳೊಂದಿಗೆ ಸರಬರಾಜು ಮಾಡಲಾದ ಲೇಖನ ಸಾಮಗ್ರಿಗಳ ಒಟ್ಟು ಬೆಲೆ ರೂ.54,609/– (ರೂಪಾಯಿ ಐವತ್ನಾಲ್ಕು ಸಾವಿರದ

ಆರು ನೂರ ಒಂಬತ್ತು ರೂಪಾಯಿಗಳು ಮಾತ್ರ) ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರಿಗೆ ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ.

2. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2052-00-090-0-01-051 ಸಾಮಾನ್ಯ ವೆಚ್ಚಗಳ ಯೋಜನೇತರರಡಿಯಲ್ಲಿ ಭರಿಸತಕ್ಕದ್ದು.

3. ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಆದೇಶ ಸಂಖ್ಯೆ: ಸಿಆಸುಇ 3 ಡಿಎಸ್‌ವೈ 2011 ದಿನಾಂಕ 18-8-2011ರ ಆದೇಶಗಳಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಶಿವಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್.652

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

ವಿಷಯ : ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ 2011-12ರ ಸಾಲಿನಲ್ಲಿ ಪೀಠೋಪಕರಣ ಸರಬರಾಜು ಮಾಡಿದ ಬಾಬ್ತು, ವ್ಯವಸ್ಥಾಕರು, ಜನತಾ ಬಜಾರ್, ಬೆಂಗಳೂರು ಇವರಿಗೆ ಹಣ ಬಿಡುಗಡೆ ಮಾಡುವ ಬಗ್ಗೆ.

ಓದಲಾಗಿದೆ : 1) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2011, ದಿನಾಂಕ:18-08-2011.
2) ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರಿಗೆ ಬರೆದಿರುವ ಸರ್ಕಾರದ ಪತ್ರ ಸಂಖ್ಯೆ: ಮೂಅಇ 210 ಮೂಇವಿ 2011, ದಿನಾಂಕ:29-12-2011
3) ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರ ಸಾಲದ ವಿಕ್ರಯ ಪಟ್ಟಿ ಸಂಖ್ಯೆ: 383 ದಿನಾಂಕ 29-12-2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 18-8-2011ರ ಆದೇಶದಲ್ಲಿ 2011-12ನೇ ಸಾಲಿನ ಆರ್ಥಿಕ ವರ್ಷದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ರೂ.40,000/-ಗಳನ್ನು ಪೀಠೋಪಕರಣಗಳ ಖರೀದಿಗೆ ಹಂಚಿಕೆ ಮಾಡಲಾಗಿದೆ.

2. ಮೇಲೆ (2)ರಲ್ಲಿ ಓದಲಾದ ದಿನಾಂಕ 29-12-2011ರ ಪತ್ರದಲ್ಲಿ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಗೆ ಅವಶ್ಯವಿರುವ ಪೀಠೋಪಕರಣಗಳನ್ನು ಸರಬರಾಜು ಮಾಡುವಂತೆ ಕೋರಲಾಗಿದೆ.

3. ಮೇಲೆ (3)ರ ದಿನಾಂಕ 29-12-2011ರ ಪತ್ರದಲ್ಲಿ ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರ ಸಾಲದ ವಿಕ್ರಯ ಪಟ್ಟಿಗಳೊಂದಿಗೆ ಪಿಠೋಪಕರಣಗಳನ್ನು ಒದಗಿಸಿದ್ದು ಅದರ ಒಟ್ಟು ಬೆಲೆ ರೂ.39,957/-ಗಳಾಗಿರುತ್ತದೆ. ವ್ಯಾಟ್ 14% ಸೇರಿ ಮೊತ್ತ ಒಟ್ಟು ಮೊತ್ತ ರೂ. 39,957/- (ರೂಪಾಯಿ ಮೂವತ್ತೊಂಬತ್ತು ಸಾವಿರದ ಒಂಭೈನೂರ ಐವತ್ತೇಳು ಮಾತ್ರ) ಹಣ ಪಾವತಿಸುವಂತೆ ಕೋರಿರುತ್ತಾರೆ.

4. ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 210 ಮೂಇವಿ (2) 2011, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವ್ಯವಸ್ಥಾಪಕರು ಜನತಾ ಬಜಾರ್, ಬೆಂಗಳೂರು ಇವರು ದಿನಾಂಕ 29-12-2011 ಸಾಲದ ವಿಕ್ರಯ ಪಟ್ಟಿಗಳೊಂದಿಗೆ ಸರಬರಾಜು ಮಾಡಲಾದ ಪಿಠೋಪಕರಣಗಳ ಒಟ್ಟು ಮೊತ್ತ ರೂ. 39,957/- (ರೂಪಾಯಿ ಮೂವತ್ತೊಂಬತ್ತು ಸಾವಿರದ ಒಂಭೈನೂರ ಐವತ್ತೇಳು ಮಾತ್ರ) ವ್ಯವಸ್ಥಾಪಕರು, ಜನತಾ ಬಜಾರ್, ಬೆಂಗಳೂರು ಇವರಿಗೆ ಪಾವತಿಸಲು ಸರ್ಕಾರವು ಮಂಜೂರಾತಿ ನೀಡಿದೆ.

2. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2052-00-090-0-01-053 (ಪಿಠೋಪಕರಣ) ಯೋಜನೇತರ ರಡಿಯಲ್ಲಿ ಭರಿಸತಕ್ಕದ್ದು.

3. ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಆದೇಶ ಸಂಖ್ಯೆ: ಸಿಆಸುಇ 3 ಡಿಎಸ್‌ವೈ 2011 ದಿನಾಂಕ 18-8-2011ರ ಆದೇಶಗಳಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಶಿವಲಿಂಗಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್.653

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

ಓದಲಾಗಿದೆ : 1) ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 270 ಎಸ್‌ಜಿಟಿ 85, ದಿನಾಂಕ:31-01-1986.
2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 616 ಸಆಸೇ 2010, ದಿನಾಂಕ:04-01-2011.
3) ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಕಂಇ 1 ವಿಕೋಆ 2011, ದಿನಾಂಕ 03-12-2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ ಹಾಗೂ ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಈ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ:01-02-2011ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿತ್ತು.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 1 ಹುದ್ದೆ |
| 2. | ಹಿರಿಯ ಸಹಾಯಕ | 1 ಹುದ್ದೆ |
| 3. | ಸಹಾಯಕ | 1 ಹುದ್ದೆ |
| 4. | ಕಿರಿಯ ಸಹಾಯಕ | 1 ಹುದ್ದೆ |
| 5. | ಬೆರಳಚ್ಚುಗಾರರು | 1 ಹುದ್ದೆ |
| 6. | ದಲಾಯತ್ | 1 ಹುದ್ದೆ |
| 7. | ವಾಹನ ಚಾಲಕ | 1 ಹುದ್ದೆ |
| | **ಒಟ್ಟು** | **7 ಹುದ್ದೆಗಳು** |

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಕಂದಾಯ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಕಂದಾಯ ಇಲಾಖೆಯ ವಿಶೇಷ ಕೋಶದಲ್ಲಿರುವ 7 ಹುದ್ದೆಗಳನ್ನು ದಿನಾಂಕ: 01-01-2012 ರಿಂದ ಮತ್ತೆ ಒಂದು ವರ್ಷದ ಅವಧಿಯವರೆಗೆ ಮುಂದುವರೆಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 92 ಸಅಸೇ 2012, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2012**

ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ವಿಶೇಷ ಕೋಶದ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 01-01-2012ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಅಧೀನ ಕಾರ್ಯದರ್ಶಿ (ವಿಶೇಷ ಕೋಶ) | 1 ಹುದ್ದೆ |
| 2. | ಹಿರಿಯ ಸಹಾಯಕ | 1 ಹುದ್ದೆ |
| 3. | ಸಹಾಯಕ | 1 ಹುದ್ದೆ |
| 4. | ಕಿರಿಯ ಸಹಾಯಕ | 1 ಹುದ್ದೆ |
| 5. | ಬೆರಳಚ್ಚುಗಾರರು | 1 ಹುದ್ದೆ |
| 6. | ದಲಾಯತ್ | 1 ಹುದ್ದೆ |
| 7. | ವಾಹನ ಚಾಲಕ | 1 ಹುದ್ದೆ |
| | **ಒಟ್ಟು** | **7 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10-07-1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್.654 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ

(ಸೇವೆಗಳು-3)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

ವಿಷಯ : ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರೆಯುತ್ತಿರುವ ತಾಂತ್ರಿಕ ಹುದ್ದೆಗಳನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿವಾಗಿ ಮುಂದುವರೆಸುವ ಬಗ್ಗೆ.

ಓದಲಾಗಿದೆ :
1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 470 ಎಸ್‌ಜಿಬಿ 82, ದಿನಾಂಕ:01-09-1982.
2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಸಿವಿ 96, ದಿನಾಂಕ:24-02-1998
3) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 01 ಸಸಿವಿ 99, ದಿನಾಂಕ:23-04-2001
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2001, ದಿನಾಂಕ:19-11-2001
5) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 89 ಸಸಿವಿ 2005, ದಿನಾಂಕ:13-01-2006
6) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಸಸಿವಿ 2006, ದಿನಾಂಕ:18-01-2007
7) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಅಸೇ 2008, ದಿನಾಂಕ:11-06-2008
8) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 365 ಸಅಸೇ 2009, ದಿನಾಂಕ:15-09-2009
9) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 631 ಸಅಸೇ 2009, ದಿನಾಂಕ:31-12-2009
10) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 583 ಸಅಸೇ 2010, ದಿನಾಂಕ:15-12-2010
11) ಅನಧಿಕೃತ ಟಿಪ್ಪಣಿ ಸಂಖ್ಯೆ: ಜಸಂಇ 94 ಎಂಎಂಕೆ 2011, ದಿನಾಂಕ:05-12-2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿ ತಾಂತ್ರಿಕ ಸಿಬ್ಬಂದಿ ವೃಂದದ 21 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದ್ದು, ಸದರಿ ಹುದ್ದೆಗಳನ್ನು ಮೇಲೆ ಕ್ರಮ ಸಂಖ್ಯೆ (2)ರ ರಿಂದ (7) ರವರೆಗೆ ಓದಲಾದ ಆದೇಶಗಳಲ್ಲಿ

ಕಾಲಕಾಲಕ್ಕೆ ಮುಂದುವರೆಸಲಾಗಿದೆ. ಸದರಿ ಹುದ್ದೆಗಳಲ್ಲಿ ವಿಶ್ವಬ್ಯಾಂಕ್ ಶಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (8)ರಲ್ಲಿ ಓದಲಾದ ಆದೇಶದಲ್ಲಿ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) ಹುದ್ದೆಯನ್ನು ನಿಲಂಬನೆಯಲ್ಲಿಟ್ಟು ಹೊಸದಾಗಿ ವಿಶೇಷಾಧಿಕಾರಿ (ವಿಶ್ವಬ್ಯಾಂಕ್) ಹುದ್ದೆಯನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (11)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯಲ್ಲಿನ ಈ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 01-01-2012 ರಿಂದ ಮುಂದುವರೆಸುವಂತೆ ಜಲಸಂಪನ್ಮೂಲ ಇಲಾಖೆಯು ಕೋರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 91 ಸಅಸೇ 2012, ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2012**

ಕರ್ನಾಟಕ ಸರ್ಕಾರದ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಸೃಜಿಸಲಾಗಿರುವ ಈ ಕೆಳಕಂಡ ತಾಂತ್ರಿಕ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 01–01–2012ರಿಂದ 31–12–2012ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1. | ಸರ್ಕಾರದ ಉಪ ಕಾರ್ಯದರ್ಶಿ ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | 01 |
| | ಶೀಘ್ರಲಿಪಿಗಾರ | 01 |
| | ಕಿರಿಯ ಸಹಾಯಕ | 01 |
| | ದಲಾಯತ್ | 01 |
| | **ಒಟ್ಟು** | **04** |
| 2 | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3** | |
| | ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 01 |
| | ಶಾಖಾಧಿಕಾರಿ | 01 |
| | ಹಿರಿಯ ಸಹಾಯಕರು | 02 |
| | ಸಹಾಯಕರು | 01 |
| | ಶೀಘ್ರಲಿಪಿಗಾರ | 01 |
| | ಕಿರಿಯ ಸಹಾಯಕ | 01 |
| | ಬೆರಳಚ್ಚುಗಾರ | 01 |
| | ದಲಾಯತ್ | 01 |
| | **ಒಟ್ಟು** | **09** |
| 3. | ಶಾಖಾಧಿಕಾರಿ | 01 |
| | ಹಿರಿಯ ಸಹಾಯಕ | 01 |
| | ಸಹಾಯಕ | 01 |
| | ಶೀಘ್ರಲಿಪಿಗಾರ | 01 |
| | ಕಿರಿಯ ಸಹಾಯಕ | 01 |
| | ಬೆರಳಚ್ಚುಗಾರ | 01 |
| | ದಲಾಯತ್ | 01 |
| | **ಒಟ್ಟು** | **07** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರಲ್ಲಿ ಇಲಾಖಾ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–3)

ಪಿ.ಆರ್.655

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

ವಿಷಯ : ವಿವಿಧ ವರ್ಗಗಳ ಮಾರಾಟಗಾರರ ನಮೂದಿತ ಪಟ್ಟಿಯ ಕುರಿತು

ಓದಲಾಗಿದೆ : 1) ದಿನಾಂಕ:01–02–2010ರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 30 ವಿಮಾಆ 2008.

2) ದಿನಾಂಕ:28–12–2011ರ ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 32 ವಿಮಾಆ 2011.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ, ನೆಟ್‌ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ, ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವ ಇತ್ಯಾದಿಗಾಗಿ ನಾನಾ ಸಂಸ್ಥೆಗಳನ್ನು ಸಂಕ್ಷಿಪ್ತಗೊಳಿಸಿ, ಮಾರಾಟಗಾರರ ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಅನುಮೋದನೆ ನೀಡಲಾಗಿದೆ. ಸದರಿ ಪಟ್ಟಿಯಲ್ಲಿರುವ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ 15–2–2012ರವರೆಗೆ ವಿಸ್ತರಿಸಲು ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಆದೇಶಿಸಲಾಗಿದೆ. 2012–13ನೇ ಸಾಲಿಗೆ ಹೊಸ ಪಟ್ಟಿ

ಸಿದ್ದಪಡಿಸುವ ಪ್ರಕ್ರಿಯೆ ಪ್ರಾರಂಭವಾಗಿದ್ದು, ಇನ್ನೂ ಅಂತಿಮವಾಗಿಲ್ಲವಾದ್ದರಿಂದ ಸದರಿ ಆದೇಶದನ್ವಯ ಪ್ರಸ್ತುತ ಚಾಲ್ತಿಯಲ್ಲಿರುವ ಮಾರಾಟಗಾರರ ಪಟ್ಟಿಯ ಸಿಂಧುತ್ವವನ್ನು ಮತ್ತೇ ವಿಸ್ತರಿಸುವುದು ಅವಶ್ಯವಾಗಿದೆ. ಅದರಂತೆ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 32 ವಿಮಾಅ 2011, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2012**

2. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ರಾಜ್ಯದಲ್ಲಿರುವ ವಿವಿಧ ಸರ್ಕಾರಿ ಕಛೇರಿಗಳಲ್ಲಿ ಗಣಕೀಕರಣಕ್ಕಾಗಿ ಅವಶ್ಯವಿರುವ ಗಣಕ ಯಂತ್ರಗಳು, ಪ್ರಿಂಟರುಗಳು, ಅವುಗಳ ಪೂರಕ ಸಾಧನಗಳು, ವಿವಿಧ ತಂತ್ರಾಂಶಗಳು, ತಂತ್ರಾಂಶ ಸಿದ್ದಪಡಿಸುವ, ನೆಟ್ ವರ್ಕಿಂಗ್, ಯು.ಪಿ.ಎಸ್., ತರಬೇತಿ, ವೆಬ್ ಡಿಸೈನಿಂಗ್, ಡೇಟಾ ಎಂಟ್ರಿ ಹಾಗೂ ವಾರ್ಷಿಕ ನಿರ್ವಹಣೆ ಮುಂತಾದ ಸಾಮಗ್ರಿ/ಸೇವೆಗಳನ್ನು ಪೂರೈಸುವ ಇತ್ಯಾದಿಗಾಗಿ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿನ ಸಂಸ್ಥೆಗಳ ಸಿಂಧುತ್ವವನ್ನು ದಿನಾಂಕ 15–2–2012 ರಿಂದ ದಿನಾಂಕ 31–03–2012ರವರೆಗೆ ಈ ಮೂಲಕ ವಿಸ್ತರಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಬಿ.ಬಹ್ಮ ಪ್ರಸಾದ್**

ಪಿ.ಆರ್.656

ಪೀಠಾಧಿಕಾರಿ–1

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ–ಆಡಳಿತ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** 20 ವರ್ಷಗಳ ಸೇವೆ ಸಲ್ಲಿಸಿದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗೆ ಸೇರಿದ ವೈದ್ಯಾಧಿಕಾರಿಗಳಿಗೆ ಕಾಲಮಿತಿ ಮುಂಬಡ್ತಿ ಯೋಜನೆಯಡಿ ಮೂರನೇ ಕಾಲಮಿತಿ ಮುಂಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಆಕುಕ 222 ಎಂಎಸ್ಎಸ್ 90, ದಿನಾಂಕ 19–7–1991
2) ಆಯುಕ್ತರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಅವರ ಪತ್ರ ಸಂಖ್ಯೆ: ಜೆ.ಆರ್.ಓ. (1ಎ) 146/2011–12, ದಿನಾಂಕ 18–11–2011.
3) ದಿನಾಂಕ 24–11–2011 ರಂದು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.
4) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 44 ಎಸ್ಆರ್‌ಪಿ 2011, ದಿನಾಂಕ 31–12–2011.

**ಪ್ರಸ್ತಾವನೆ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ (ಅಂದಿನ Assistant Surgeon cum Health Officers) ನೇಮಕಗೊಳ್ಳುವ ಎಂ.ಬಿ.ಬಿ.ಎಸ್. ವಿದ್ಯಾರ್ಹತೆಯ ವೈದ್ಯಾಧಿಕಾರಿಗಳು 6 ವರ್ಷಗಳ ಸೇವೆ ಪೂರೈಸಿದರೆ ಕಾಲಮಿತಿ ಮುಂಬಡ್ತಿ ಯೋಜನೆಯಡಿಯಲ್ಲಿ ಹಿರಿಯ ವೈದ್ಯಾಧಿಕಾರಿಯಾಗಿ ಹಾಗೂ ಸ್ನಾತಕೋತ್ತರ ಪದವಿ/ಡಿಪ್ಲೋಮ ಹೊಂದಿದ್ದಲ್ಲಿ ತಜ್ಞ ವೈದ್ಯರಾಗಿ ಮುಂಬಡ್ತಿ ಪಡೆಯಲು ಮೇಲೆ (1)ರಲ್ಲಿ ಓದಲಾದ ದಿನಾಂಕ 19–7–1991ರ ಸರ್ಕಾರಿ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಮುಂದುವರೆದು, ಸದರಿ ವೈದ್ಯಾದಿಕಾರಿಗಳು 13 ವರ್ಷಗಳ ಸೇವೆ ಪೂರೈಸಿದರೆ ಕ್ರಮವಾಗಿ ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರಾಗಿ ಮುಂಬಡ್ತಿ ಪಡೆಯಲೂ ಸಹ ಸದರಿ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ. ಈ ಹುದ್ದೆಗಳು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರ್ಪಡೆಯಾಗಿವೆ.

ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯ ಹುದ್ದೆಯ ವೇತನ ಶ್ರೇಣಿ ₹14050–25050 ಆಗಿದ್ದು ಸದರಿ ವೃಂದದಲ್ಲಿ ಒಟ್ಟು 2585 ಹುದ್ದೆಗಳು ಮಂಜೂರಾಗಿವೆ. ಹಿರಿಯ ವೈದ್ಯಾಧಿಕಾರಿಗಳ/ತಜ್ಞ ವೈದ್ಯರ ವೇತನ ಶ್ರೇಣಿಯು ₹15200–25650 ಆಗಿದ್ದು ಸದರಿ ವೃಂದಗಳಲ್ಲಿ ಪ್ರಸ್ತುತ ಕ್ರಮವಾಗಿ 345 ಮತ್ತು 46 ವೈದ್ಯರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಮುಂದುವರೆದು, ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರ ವೇತನ ಶ್ರೇಣಿಯು ₹18050–29925 ಆಗಿದ್ದು, ಸದರಿ ವೃಂದಗಳಲ್ಲಿ ಕ್ರಮವಾಗಿ 116 ಮತ್ತು 1211 ವೈದ್ಯರು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇಲಾಖೆಯ ವೈದ್ಯರಿಗೆ ಸಂಬಂಧಿಸಿದಂತೆ ಮುಂದಿನ ಮುಂಬಡ್ತಿ ವೃಂದವು ಜಂಟಿ ನಿರ್ದೇಶಕ ವೃಂದವಾಗಿದ್ದು ಸದರಿ ಹುದ್ದೆಯ ವೇತನ ಶ್ರೇಣಿಯು ₹20025–28275 ಆಗಿದೆ. ಈ ವೃಂದದಲ್ಲಿ ಕೇವಲ 12 ಹುದ್ದೆಗಳು ಮಾತ್ರ ಸೃಜನೆಯಾಗಿವೆ.

ಸರ್ಕಾರದ ಸಾಮಾನ್ಯ ನೀತಿಯ ಪ್ರಕಾರ, ಒಬ್ಬ ಸರ್ಕಾರಿ ನೌಕರನು ತನ್ನ ಸೇವಾವಧಿಯಲ್ಲಿ ಕನಿಷ್ಠ 3 ಮುಂಬಡ್ತಿಗಳನ್ನು ಪಡೆಯುವ ಅವಕಾಶವಿರಬೇಕು. ಉಪ ಮುಖ್ಯ ವೈದ್ಯಾಧಿಕಾರಿ/ಹಿರಿಯ ತಜ್ಞರಾಗಿ ಕಾಲಮಿತಿ ಮುಂಬಡ್ತಿ ಯೋಜನೆಯಡಿ ಮುಂಬಡ್ತಿಯನ್ನು ಪಡೆದ ನಂತರ, ಬಹುತೇಕ ವೈದ್ಯರು ಮುಂದಿನ ಮುಂಬಡ್ತಿ ಇಲ್ಲದೆ ಅವಕಾಶ ವಂಚಿತರಾಗಿದ್ದಾರೆ. ಅಂದರೆ, ಅವರ ಸೇವಾವಧಿಯಲ್ಲಿ ಕೇವಲ 2 ಮುಂಬಡ್ತಿಗಳನ್ನು ಮಾತ್ರ ಪಡೆದು ನಿವೃತ್ತರಾಗುತ್ತಿದ್ದಾರೆ. ಈ ಅಸಮತೋಲನವನ್ನು ಸರಿಪಡಿಸಲು ಇಲಾಖೆಯಲ್ಲಿ 20 ವರ್ಷ ಸೇವೆ ಸಲ್ಲಿಸಿದ ವೈದ್ಯರಿಗೆ 3ನೇ ಕಾಲಮಿತಿ ಮುಂಬಡ್ತಿಯನ್ನು ನೀಡಬೇಕೆಂದು ಕರ್ನಾಟಕ ರಾಜ್ಯದ ಸರ್ಕಾರಿ ವೈದ್ಯಾಧಿಕಾರಿಗಳ ಸಂಘವು ಬೇಡಿಕೆ ಸಲ್ಲಿಸಿತ್ತು. ಅದರಂತೆ, 3ನೇ ಕಾಲಮಿತಿ ಮುಂಬಡ್ತಿಯನ್ನು ಮಂಜೂರು ಮಾಡಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ. ಮುಂದುವರೆದು, ಈ ಕುರಿತು ಮಾನ್ಯ ಮುಖ್ಯ ಮಂತ್ರಿಯವರ ಅಧ್ಯಕ್ಷತೆಯಲ್ಲಿ ದಿನಾಂಕ 24–11–2011ರಂದು ನಡೆದ ಸಭೆಯಲ್ಲಿ ಚರ್ಚಿಸಿ, 20 ವರ್ಷಗಳ ಸೇವೆ ಸಲ್ಲಿಸಿದ ವೈದ್ಯರಿಗೆ 3ನೇ ಕಾಲಮಿತಿ ಮುಂಬಡ್ತಿ ಮಂಜೂರು ಮಾಡುವಂತೆ ವೈದ್ಯಾಧಿಕಾರಿಗಳ ಸಂಘದ ಬೇಡಿಕೆಯನ್ನು. ಪರಿಗಣಿಸಲು ತಾತ್ವಿಕವಾಗಿ ಒಪ್ಪಿಗೆ ನೀಡಲಾಗಿದೆ.

20 ವರ್ಷಗಳ ಸೇವೆ ಸಲ್ಲಿಸಿದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗೆ ಸೇರಿದ ವೈದ್ಯಾಧಿಕಾರಿಗಳಿಗೆ 3ನೇ ಕಾಲಮಿತಿ ಮುಂಬಡ್ತಿ ಮಂಜೂರು ಮಾಡುವ ಬಗ್ಗೆ ಆಯುಕ್ತರು ಸಲ್ಲಿಸಿರುವ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಪ್ರಸ್ತಾಪಿಸಿರುವಂತೆ, 3ನೇ ಕಾಲಮಿತಿ ಮುಂಬಡ್ತಿಯನ್ನು ನೀಡುವಾಗ ಉಪ ಮುಖ್ಯ ವೈದ್ಯಾಧಿಕಾರಿ (ಆಯ್ಕೆ ಶ್ರೇಣಿ)/ ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂದು ಪದನಾಮೀಕರಿಸಿ ಸದರಿ ವೃಂದಕ್ಕೆ ₹19050–27600 ವೇತನ ಶ್ರೇಣಿಯನ್ನು ನಿಗಧಿಪಡಿಸಲು ಹಾಗೂ ಈ ಸೌಲಭ್ಯವನ್ನು ದಿನಾಂಕ 01–01–2012 ರಿಂದ ಅಥವಾ ಅರ್ಹ ವೈದ್ಯಾಧಿಕಾರಿಗಳು 20 ವರ್ಷಗಳ ಸೇವೆ ಸಲ್ಲಿಸಿದ ದಿನಾಂಕದಿಂದ, ಯಾವುದು ನಂತರವೋ ಆ ದಿನಾಂಕದಿಂದ ಜಾರಿಗೆ ನೀಡಲು ತೀರ್ಮಾನಿಸಲಾಗಿದೆ. ಸದರಿ ಪ್ರಸ್ತಾವನೆಗೆ ಮೇಲೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ.

ಆದುದರಿಂದ ಈ ಅದೇಶ

**ಸರ್ಕಾರದ ಆದೇಶ ಸಂಖ್ಯೆ: ಆಕುಕ 557 ಹೆಚ್‌ಎಸ್‌ಹೆಚ್ 2011, ಬೆಂಗಳೂರು, ದಿನಾಂಕ 03–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸರ್ಕಾರಿ ಆದೇಶ ಸಂಖ್ಯೆ: ಆಕುಕ 222 ಎಂಎಸ್ಎಸ್ 90 ದಿನಾಂಕ 19–7–1991 ಅನ್ನು ಭಾಗಶಃ ಮಾರ್ಪಾಡಿಸಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ 20 ವರ್ಷಗಳ ಸೇವೆ ಸಲ್ಲಿಸಿ ಪ್ರಸ್ತುತ ಉಪ ಮುಖ್ಯ

ವೈದ್ಯಾಧಿಕಾರಿ/ಹಿರಿಯ ತಜ್ಞರಾಗಿ ಕರ್ತವ್ಯ ನಿರ್ವಹಿಸುತ್ತಿರುವವರಿಗೆ ವೇತನ ಶ್ರೇಣಿ ರೂ. 19050–27600 ರಲ್ಲಿ ಕ್ರಮವಾಗಿ ಉಪ ಮುಖ್ಯ ವೈದ್ಯಾಧಿಕಾರಿ (ಆಯ್ಕೆ ಶ್ರೇಣಿ) ಹಾಗೂ ಹಿರಿಯ ತಜ್ಞರು (ಆಯ್ಕೆ ಶ್ರೇಣಿ) ಎಂಬುದಾಗಿ ಪದನಾಮವನ್ನು ನೀಡಿ 3ನೇ ಕಾಲಮಿತಿ ಮುಂಬಡ್ತಿಯನ್ನು ನೀಡಲು ಸರ್ಕಾರವು ಮಂಜೂರಾತಿ ನೀಡಿದೆ. ಈ ಸೌಲಭ್ಯವು ದಿನಾಂಕ 01–01–2012 ರಿಂದ ಅಥವಾ ಅರ್ಹ ವೈದ್ಯಾಧಿಕಾರಿಗಳು 20 ವರ್ಷಗಳ ಸೇವೆ ಸಲ್ಲಿಸಿದ ದಿನಾಂಕದಿಂದ, ಯಾವುದು ನಂತರವೋ ಆ ದಿನಾಂಕದಿಂದ ಜಾರಿಗೆ ಬರುವಂತೆ ಆದೇಶಿಸಿದೆ. ಮುಂದುವರೆದು, ಸರ್ಕಾರಿ ಆದೇಶ ಸಂಖ್ಯೆ: ಆಕುಕ 222 ಎಂಎಸ್ಎಸ್ 90 ದಿನಾಂಕ 19–7–1991 ರಲ್ಲಿ ನಿಗದಿಪಡಿಸಿರುವ ಇತರೇ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಮೇಲ್ಕಂಡ ಕಾಲಮಿತಿ ಮುಂಬಡ್ತಿಯಲ್ಲಿ ತಿಳಿಸಿರುವ ವೃಂದಗಳನ್ನು ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಲು ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ರವರು ಸರ್ಕಾರಕ್ಕೆ ಪ್ರತ್ಯೇಕವಾಗಿ ಪ್ರಸ್ತಾವನೆಯನ್ನು ಸಲ್ಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ 44 ಎಸ್ಆರ್‌ಪಿ 2011 ದಿನಾಂಕ 31–12–2011ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಿಕ್ಕೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

ಪಿ.ಆರ್. 666

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ)ಗೆ ಸೇರಿದ ಉಪ ಕಾರ್ಯದರ್ಶಿ, ಪಂಚಾಯತ್ ರಾಜ್ (ಹಿರಿಯ ಶ್ರೇಣಿ)ಯ 40 ತಾತ್ಕಾಲಿಕ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.–

**ಪ್ರಸ್ತಾವನೆ :**

1983ರ ಜಿಲ್ಲಾ ಪರಿಷತ್ತುಗಳು, ತಾಲ್ಲೂಕು ಪಂಚಾಯಿತಿ ಸಮಿತಿಗಳು, ಮಂಡಲ ಪಂಚಾಯಿತಿಗಳು ಮತ್ತು ನ್ಯಾಯ ಪಂಚಾಯತಿಗಳ ಅಧಿನಿಯಮವು ದಿನಾಂಕ 01–04–1987 ರಿಂದ ಜಾರಿಗೆ ಬಂದ ಪರಿಣಾಮ ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮ ಮಟ್ಟಗಳಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳು ಸ್ಥಾಪನೆಗೊಂಡಿದ್ದು ಇದರಿಂದಾಗಿ ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆಯ ಕಾರ್ಯಚಟುವಟಿಕೆಗಳು ಪೂರ್ಣ ಪ್ರಮಾಣದಲ್ಲಿ ಬದಲಾವಣೆಗೊಂಡವು. ನಂತರದಲ್ಲಿ ಕೇಂದ್ರ ಸರ್ಕಾರವು ಸಂವಿಧಾನಕ್ಕೆ ತಂದ 73 ಮತ್ತು 74ನೇ ತಿದ್ದುಪಡಿಯನ್ವಯ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ನ್ನು ದಿನಾಂಕ 10–5–1993 ರಿಂದ ಜಾರಿಗೆ ತಂದ ಮೇರೆಗೆ ಜಿಲ್ಲಾ ತಾಲ್ಲೂಕು ಹಾಗೂ ಗ್ರಾಮ ಪಂಚಾಯತಿಗಳೆಂಬ ಪಂಚಾಯತ್ ರಾಜ್ ಸಂಸ್ಥೆಗಳು ಜಿಲ್ಲಾ ತಾಲ್ಲೂಕು ಹಾಗೂ ಗ್ರಾಮ ಮಟ್ಟಗಳಲ್ಲಿ ಸ್ಥಾಪನೆಗೊಂಡ ಪರಿಣಾಮ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಕಾರ್ಯಚಟುವಟಿಕೆಗಳು ಹೆಚ್ಚಾದವು ಇದರಿಂದ ಜಿಲ್ಲಾ ಮಟ್ಟದಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಯ ಅಧಿಕಾರಿಗಳ ಕರ್ತವ್ಯ ಮತ್ತು ಜವಾಬ್ದಾರಿಗಳು ಮತ್ತಷ್ಟು ಹೆಚ್ಚಾದವು.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಉಪ ಕಾರ್ಯದರ್ಶಿ (ಆಡಳಿತ) (ಅಭಿವೃದ್ಧಿ)ಇವರುಗಳು ಸರ್ಕಾರದ ಸುಮಾರು 27 ಇಲಾಖೆಗಳ ಜಿಲ್ಲಾ ಮಟ್ಟದ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನಷ್ಟಾನಗೊಳಿಸುವ ಜವಾಬ್ದಾರಿ ಹೊಂದಿದರು.

ಕೇಂದ್ರ ಸರ್ಕಾರವು 2005 ರಲ್ಲಿ ಮಹಾತ್ಮಗಾಂಧಿ, ರಾಷ್ಟ್ರೀಯ ಗ್ರಾಮೀಣ, ಉದ್ಯೋಗ ಖಾತರಿ ಅಧಿನಿಯಮದಂತೆ ಉದ್ಯೋಗ ಖಾತ್ರಿ ಯೋಜನೆ ರಾಷ್ಟ್ರೀಯ ಗ್ರಾಮೀಣ ನೀರು ಸರಬರಾಜು ಯೋಜನೆ ಮತ್ತು ಕರ್ನಾಟಕ ರಾಜ್ಯ ನೀರು ಮತ್ತು ನೈರ್ಮಲ್ಯ ಅಭಿಯಾನದಡಿ ಗ್ರಾಮೀಣ ಕುಡಿಯುವ ನೀರಿನ ಸೌಕರ್ಯ ಒದಗಿಸುವುದು, ಇದಲ್ಲದೆ, ಗ್ರಾಮೀಣ ಪ್ರದೇಶದ ಮಹಿಳೆಯರನ್ನು ಸಬಲೀಕರಣಗೊಳಿಸುವ "ಆಜೀವಿಕ" (National Rural Livelihood Mission) ಯೋಜನೆ ಅನುಷ್ಠಾನ ಮತ್ತಿತರ ಎಲ್ಲಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಗುರುತರವಾದ ಜವಾಬ್ದಾರಿಯು ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆಗೆ ವಹಿಸಲಾಗಿರುತ್ತದೆ. ಈ ಎಲ್ಲಾ ಕಾರ್ಯಕ್ರಮಗಳು ನಿರಂತರವಾಗಿದ್ದು ಶಾಶ್ವತತೆಯನ್ನು ಹೊಂದಿರುತ್ತವೆ.

ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಪ್ರಾಯೋಜಿತ ಕಾರ್ಯಕ್ರಮ/ಯೋಜನೆಗಳನ್ನು ಪರಿಣಾಕಾರಿಯಾಗಿ, ಕಾನೂನು ರೀತ್ಯ ಹಾಗೂ ಅಭಿಯಾನದ ರೂಪದಲ್ಲಿ ಅನುಷ್ಠಾನಗೊಳಿಸುವ ಗುರುತರ ಜವಾಬ್ದಾರಿ ಈ ಇಲಾಖೆಗೆ ಇದ್ದು ಅದಕ್ಕೆ ಪೂರಕವಾಗಿ ಮಾನವ ಸಂಪನ್ಮೂಲ ಒದಗಿಸುವ ಅಗತ್ಯವಿದೆ.

ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ)ಗೆ ಸೇರಿದ ಉಪಕಾರ್ಯದರ್ಶಿ, ಪಂಚಾಯತ್ ರಾಜ್ (ಹಿರಿಯ ಶ್ರೇಣಿ)ಯ 40 ಹುದ್ದೆಗಳು ಹಿಂದೆಯೆ ಸೃಜನಗೊಂಡು ಅಸ್ತಿತ್ವದಲ್ಲಿದ್ದಾಗ್ಯೂ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ಧಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ)ಗೆ ಸೇರಿದ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸದರಿ ಹುದ್ದೆಗಳನ್ನು ತಾತ್ಕಾಲಿಕ ಹುದ್ದೆಗಳೆಂದು ನಮೂದಿಸಲ್ಪಟ್ಟಿದೆ. ಹಾಗಾಗಿ ಸದರಿ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಮುಂದುವರಿಸುವುದು ಅಗತ್ಯವೆಂದು ಸರ್ಕಾರವು ತೀರ್ಮಾನಿಸಿದ್ದು, ಅದರಂತೆ, ಕೆಳಕಂಡ ಅದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 281 ಪಬವ 2011, ಬೆಂಗಳೂರು, ದಿನಾಂಕ 14–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಕರ್ನಾಟಕ ಸಾಮಾನ್ಯ ಸೇವೆ (ಅಭಿವೃದ್ದಿ ಶಾಖೆ ಮತ್ತು ಸ್ಥಳೀಯ ಆಡಳಿತ ಶಾಖೆ)ಗೆ ಸೇರಿದ ಉಪ ಕಾರ್ಯದರ್ಶಿ, ಪಂಚಾಯತ್ ರಾಜ್ (ಹಿರಿಯ ಶ್ರೇಣಿ) (ವೇತನ ಶ್ರೇಣಿ ₹20025–28275) 40 ತಾತ್ಕಾಲಿಕ ಹುದ್ದೆಗಳನ್ನು ಖಾಯಂ ಹುದ್ದೆಗಳೆಂದು ಪರಿಗಣಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 58 ಎಸ್ಆರ್ಎಸ್ 79, ದಿನಾಂಕ 27–9–1979 ರಂತೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಯು. ಶಿವಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

(ಸೇವೆಗಳು ಬಿ ಮತ್ತು ಸಿ ಶಾಖೆ)

ಗ್ರಾಮೀಣಾಭಿವೃದ್ಧಿ ಮತ್ತು ಪಂ. ರಾಜ್ ಇಲಾಖೆ

ಪಿ.ಆರ್. 667

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶಾಸಕರು ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ 2010–11ನೇ ಸಾಲಿನ ಮೂರನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಯೋಇ 41 ಯೋವಿವಿ 2010, ದಿನಾಂಕ 26–02–2011

2) ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು ಇವರ ಪತ್ರ ಸಂಖ್ಯೆ: ಕಂದಾಯ/ಶಾನಿ/47/2010–11/5136, ದಿನಾಂಕ 09–12–2011.

3) ಸರ್ಕಾರಿ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ 16–07–2001

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಆದೇಶದಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ ಅಡಿಯಲ್ಲಿ 2010–11ನೇ ಸಾಲಿನಲ್ಲಿ ಮೂರನೇ ಕಂತಾಗಿ ರೂ. 150.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿತ್ತು. ಮೇಲೆ ಓದಲಾದ (2)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆ, ರಾಯಚೂರು ಇವರು ಸದರಿ ಆದೇಶದನ್ವಯ 3ನೇ ಕಂತಿನ ಅನುದಾನದಲ್ಲಿ 6 ಜನ ಶಾಸಕರ ಅನುದಾನ ರೂ. 300.00 ಲಕ್ಷ ಖಜಾನೆಯಿಂದ ಕ್ಲೇಮ್ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿರುವುದಾಗಿ ತಿಳಿಸಿದ್ದಾರೆ. ಆದರೆ ಉಭಯ ವಿಧಾನ ಪರಿಷತ್ ಸದಸ್ಯರ ಅನುದಾನ ರೂ. 100.00 ಲಕ್ಷಗಳು ಕಣ್ಣು ತಪ್ಪಿನಿಂದ ಕ್ಲೇಮ್ ಮಾಡಿರುವುದಿಲ್ಲವೆಂದು ತಿಳಿಸಿದ್ದಾರೆ. ಹಾಗೂ ಮಾನ್ಯ ವಿಧಾನ ಪರಿಷತ್ ಸದಸ್ಯರು ಈ ಸಾಲಿನಲ್ಲಿ ಕಾಮಗಾರಿಗಳನ್ನು ಕೈಗೊಳ್ಳುವಂತೆ ಪ್ರಸ್ತಾವನೆ ಸಲ್ಲಿಸಿದ್ದು ಸದರಿ ಅನುದಾನವನ್ನು 2011–12ನೇ ಸಾಲಿನಲ್ಲಿ ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಮೇಲೆ ಓದಲಾದ (3)ರ ಆದೇಶದಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಮಾರ್ಗಸೂಚಿಗಳನ್ವಯ ಹಿಂದಿನ ವರ್ಷದಲ್ಲಿ ಉಪಯೋಗಿಸದ ಅನುದಾನವನ್ನು ಪ್ರಸ್ತುತ ಹಣಕಾಸು ವರ್ಷದಲ್ಲಿ ವೆಚ್ಚಮಾಡಬಹುದಾಗಿದೆ. ಆದ್ದರಿಂದ ಈ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 41 ಯೋವಿವಿ 2010, ಬೆಂಗಳೂರು, ದಿನಾಂಕ 15–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ 2010–11ನೇ ಸಾಲಿನ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯ ಅನುಷ್ಠಾನಕ್ಕಾಗಿ ಲೆಕ್ಕಶೀರ್ಷಿಕೆ "4575–60–800–0–01–132 (ಬಂಡವಾಳ ವೆಚ್ಚಗಳು) (ಯೋಜನೆ)" ಅಡಿಯಲ್ಲಿ ತಲಾ ರೂ. 43.74 ಲಕ್ಷಗಳು(ನಲವತ್ತು ಮೂರು ಲಕ್ಷದ ಎಪ್ಪತ್ತನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "4575–60–800–0–01–422 (ವಿಶೇಷ ಘಟಕ ಯೋಜನೆ)" ಅಡಿಯಲ್ಲಿ ತಲಾ ರೂ. 4.17 ಲಕ್ಷಗಳು (ನಾಲ್ಕು ಲಕ್ಷದ ಹದಿನೇಳು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಲೆಕ್ಕಶೀರ್ಷಿಕೆ "4575–60–800–0–01–423 (ಗಿರಿಜನ ಉಪಯೋಜನೆ)" ಅಡಿಯಲ್ಲಿ ತಲಾ ರೂ. 2.09 ಲಕ್ಷಗಳು (ಎರಡು ಲಕ್ಷದ ಒಂಬತ್ತು ಸಾವಿರ ರೂಪಾಯಿಗಳು ಮಾತ್ರ) ರಂತೆ ಒಟ್ಟು ತಲಾ ರೂ. 50.00 ಲಕ್ಷಗಳು (ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಈ ಕೆಳಗೆ ಸೂಚಿಸಿರುವ ವಿಧಾನ ಪರಿಷತ್ ಸದಸ್ಯರಿಗೆ ಒಟ್ಟು ರೂ. 100.00 ಲಕ್ಷಗಳು (ನೂರು ಲಕ್ಷ ರೂಪಾಯಿಗಳು ಮಾತ್ರ) ರಾಯಚೂರು ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.

| ವಿಧಾನ ಪರಿಷತ್ ಸದಸ್ಯರ ಹೆಸರುಗಳು | | ಲೆಕ್ಕ ಶೀರ್ಷಿಕೆ "4575–60–800–0–01 | | | ಒಟ್ಟು |
|---|---|---|---|---|---|
| | | 132 ಬಂಡವಾಳ ವೆಚ್ಚ | 422–ಎಸ್.ಸಿ.ಪಿ. | 423–ಟಿ.ಎಸ್.ಪಿ. | |
| 1 | ಮನೋಹರ ಮಸ್ಕಿ | 43.74 | 4.17 | 2.09 | 50.00 |
| 2 | ಎನ್. ಶಂಕ್ರಪ್ಪ | 43.74 | 4.17 | 2.09 | 50.00 |
| | ಒಟ್ಟು | 87.48 | 8.34 | 4.18 | 100.00 |

2. ಈ ಬಿಡುಗಡೆಯಾದ ಮೊತ್ತವನ್ನು ಸರ್ಕಾರದ ಪತ್ರದ ಸಂಖ್ಯೆ: ಪಿಡಿ 250 ಪಿಎಂಎಂ 2002, ದಿನಾಂಕ 05–03–2002ರ ಪ್ರಕಾರ ಜಿಲ್ಲಾಧಿಕಾರಿಗಳ ವೈಯಕ್ತಿಕ ಖಾತೆ (ಪಿಡಿ ಅಕೌಂಟ್)ಯಲ್ಲಿ ಮೊದಲು ಜಮಾ ಮಾಡಿ ನಂತರ ಕಾರ್ಯಕ್ರಮದ ಅನುಗುಣವಾಗಿ ಖರ್ಚು ಮಾಡತಕ್ಕದ್ದು.

3. ಈ ಬಿಡುಗಡೆಯಾದ ಮೊತ್ತಕ್ಕೆ ಜಿಲ್ಲಾಧಿಕಾರಿಗಳು ಆಯಾ ಸದಸ್ಯರಿಂದ ಕ್ರಿಯಾ ಯೋಜನೆಯನ್ನು ಪಡೆದು ಸರ್ಕಾರದ ಆದೇಶ ಸಂಖ್ಯೆ: ಪಿಡಿ 486 ಪಿಎಂಎಂ 2001, ದಿನಾಂಕ 16–07–2001ರಲ್ಲಿ ಹಾಗೂ ತದನಂತರ ಹೊರಡಿಸಿದ ಪರಿಷ್ಕೃತ ಮಾರ್ಗಸೂಚಿಗಳಲ್ಲಿ ನೀಡಿರುವ ಸೂಚನೆಗಳಂತೆ ಅನುಷ್ಠಾನಗೊಳಿಸತಕ್ಕದ್ದು.

4. ನಿಯಮಾನುಸಾರ ಹಣ ಬಳಕೆ ದೃಢೀಕರಣ ಪತ್ರವನ್ನು ರಾಯಚೂರು ಜಿಲ್ಲಾಧಿಕಾರಿಗಳು, ಮೇಲು ಸಹಿಯೊಂದಿಗೆ ಸರ್ಕಾರಕ್ಕೆ ಸಲ್ಲಿಸಲು ಸೂಚಿಸಿದೆ ಹಾಗೂ ಬಿಡುಗಡೆ ಮಾಡಿದ ಅನುದಾನವನ್ನು 2011–12ನೇ ಸಾಲಿನಲ್ಲಿ ಬಳಕೆ ಮಾಡಿಕೊಳ್ಳದಿದ್ದಲ್ಲಿ ಕೈತಪ್ಪಿ (ಲ್ಯಾಪ್ಸ್) ಹೋಗುವುದು.

5. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "4575–60–800–0–01–132 (ಬಂಡವಾಳ ವೆಚ್ಚಗಳು)" "4575–60–800–0–01–422 (ವಿಶೇಷ ಘಟಕ ಯೋಜನೆ) ಹಾಗೂ "4575–60–800–0–01–423" (ಗಿರಿಜನ ಉಪಯೋಜನೆ)" ಅಡಿಯಲ್ಲಿ ಭರಿಸತಕ್ಕದ್ದು.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 567 ವೆಚ್ಚ–6/2011, ದಿನಾಂಕ 07–02–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1 ಮತ್ತು 2

ಪಿ.ಆರ್. 668 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ